# ಲಕ್ಷ್ಮಿಯ ಸಂಸಾರ

( ಕಾದಂಬರಿ )

ಭಾಗ ಒಂದು

ವೀರಕೇಸರಿ
ಸೀತಾರಾಮ ಶಾಸ್ತ್ರೀ



ನೇತ್ರಾವತಿ ಪ್ರಕಾಶನ
ಬಳೇಪೇಟೆ, ಬೆಂಗಳೂರು-೨.

ಆಣೆ 14

ನೇತ್ರಾವತಿ ಪ್ರಕಾಶನ, ೫ ನೆಯ ಕಿರಣ

ದ್ವಿತೀಯ ಮುದ್ರಣ 1955



ಸಂಪಾದಕ

[illegible]. ಕೆ. ಪೂಜಾರಿ



ಸಲಹೆಗಾರರು

ದ. ರಾ. ಬೇಂದ್ರೆ
ರಾಷ್ಟ್ರಕವಿ ಗೋವಿಂದ ಪೈ
ವಿ. ಎಸ್. ನಾರಾಯಣ ರಾವ
ಸಿದ್ದವನಹಳ್ಳಿ ಕೃಷ್ಣಶರ್ಮ
ಮಿರ್ಜಿ ಅಣ್ಣಾರಾಯರು

ಮುದ್ರಕರು

ಸಿ. ರಾಜಗೋಪಾಲಾಚಾರ್,
ಇಂಡಿಯನ್ ಪ್ರೆಸ್, ಬೆಂಗಳೂರು-3

# ಮೊದಲ ಮಾತು

ಈ ಕಾದಂಬರಿಯಲ್ಲಿ "ಶ್ಲೀಲ-ಅಶ್ಲೀಲ" ಗಳ ಗೊಂದಲಕ್ಕೆ ಎಡೆಯಿಲ್ಲ. ನವೀನ-ಪ್ರಾಚೀನ ಮಾರ್ಗಗಳ-ಹೋರಾಟವಿಲ್ಲ. ನನ್ನದೇ ಒಂದು ಮಾರ್ಗವೆಂದು ಮಾತ್ರ ಸೂಚಿಸಲು ಬಯಸುತ್ತೇನೆ. ಈ ಮಾರ್ಗದಲ್ಲಿಯೇ ವೈವಿಧ್ಯವನ್ನು ತೋರಿ ಹತ್ತಾರು ಕಾದಂಬರಿಗಳನ್ನು ಬರೆದು ವಾಚಕರಲ್ಲಿ ಒಪ್ಪಿಸಬೇಕೆಂದಿದ್ದೇನೆ. ಹೆಜ್ಜೆ ಹೆಜ್ಜೆಗೂ ಜಾಗರೂಕನಾಗಿ ನನ್ನ ಕೃತಿಗಳನ್ನು ಹೆಣೆಯುತ್ತೇನೆ.

ಆದಾಗ್ಯೂ ವಿಮರ್ಶಕರಾಗಲೀ, ವಾಚಕರಾಗಲೀ ಗುಣದೋಷಗಳನ್ನು ನಿದಾರ್ಕ್ಷಿಣ್ಯವಾಗಿ ಎತ್ತಿ ಹಿಡಿಯುವ ಸ್ವಾತಂತ್ರ್ಯ ಉಂಟೇ ಉಂಟು!

ಸುಲಭ ಪುಸ್ತಕ ಮಾಲೆಗಳ ಪ್ರವಾಹವು ಹರಿದು ಕಾದಂಬರಿಗಳಲ್ಲಿ ರಸವು ಕಡಿಮೆಯಾಗುತ್ತಿದೆ-ಎಂಬ ಎಚ್ಚರಿಕೆಯು ಎಲ್ಲ ಕಡೆಗಳಿಂದಲೂ ಬರುತ್ತಿದೆ. ಈ ಎಚ್ಚರಿಕೆಯನ್ನು ತೆಗೆದುಕೊಳ್ಳುವುದು ಗ್ರಂಥಕರ್ತರಿಗೂ ಒಳ್ಳೆಯದು. ಸಾಹಿತ್ಯದ ಬೆಳವಣಿಗೆಗೂ ಕ್ಷೇಮ! ನನ್ನಮಟ್ಟಿಗೆ ಈ ಎಚ್ಚರಿಕೆಯನ್ನು ಸ್ವಾಗತಿಸುತ್ತೇನೆ.

ಕಥಾರಚನೆಯಲ್ಲಿಯೂ, ಅನೇಕ ಮಾರ್ಗಗಳಿವೆ. ನಾಟಕದ ಅಯಕಟ್ಟಿನಲ್ಲಿ ಸಂವಾದ ರೂಪದಲ್ಲಿ ಬಿಡಿಮಾತುಗಳಲ್ಲಿ ಕಥೆಯನ್ನು ಬರೆಯುವುದೊಂದು ಮಾರ್ಗ. ಭೂತಕಾಲ ರೂಪದಲ್ಲಿ ಕಥಾ ನಿವೇದನವು ಮತ್ತೊಂದು ಮಾರ್ಗ. ಇದರಲ್ಲಿ ಗ್ರಂಥಕರ್ತನು ಯಾವ ಗ್ರಂಥವನ್ನು ಯಾವ ಕಥೆ ಯಾವ ಪಕ್ಷಿಯಲ್ಲಿ ಹೇಳಬಯಸುತ್ತಾನೋ, ಅದೇ ಶ್ರೇಷ್ಠ. ಈ ಅಂಶದಲ್ಲಿ ವಿಮರ್ಶಕರಿಗಿಂತಲೂ ವಾಚಕರ ಅಭಿಮತವೇ ಶ್ರೇಷ್ಠವಾದುದು.

ನನ್ನ ಹಿಂದಿನ ಅನೇಕ ಕಾದಂಬರಿಗಳಿಗೆ ವಾಚಕರ ಮನ್ನಣೆ ದೊರತಂತೆ ಈ ಕಾದಂಬರಿಗೂ ಸ್ವಾಗತವು ದೊರೆಯುವುದೆಂದು ಪೂರ್ಣ ಭರವಸೆ ನನಗಿದೆ. ಇದರ ದ್ವಿತೀಯ ಮುದ್ರಣಕ್ಕೆ ನೆರವಾದ "ನೇತ್ರಾವತಿ ಪ್ರಕಾಶನ" ದ ಶ್ರೀ ಕೆ. ಕೆ. ಪೂಜಾರಿಯವರಿಗೆ ನನ್ನ ನೆನಕೆ ಸಲ್ಲುತ್ತದೆ.

ಶಂಕರಪುರ,
12-7-1955

ಇತಿ,
ಎಂ. ಸೀತಾರಾಮ ಶಾಸ್ತ್ರಿ.

# ಲಕ್ಷ್ಮಿಯ ಸಂಸಾರ

## ೧

ಲಕ್ಷ್ಮೀನಿವಾಸದ ವಿಶಾಲವಾದ ಕಾಂಪೌಂಡಿನ ಆರಾಮದಲ್ಲಿ, ಬೆಳದಿಂಗಳಿನ ಪ್ರಭೆಯಲ್ಲಿ, ಪುಷ್ಪಗುಚ್ಛಗಳ ಸೌರಭದಲ್ಲಿ, ಮಂದ ಮಾರುತದ ಕ್ರೀಡೆಯಲ್ಲಿ, ಶ್ವೇತಶಿಲೆಯ ಆಸನದ ಮೇಲೆ ಲಕ್ಷ್ಮಿಯೂ, ಭಟ್ಟನೂ ಕುಳಿತಿದ್ದರು. ಪಕ್ಕದಲ್ಲಿಯೇ ಇದ್ದ ಸಮುದ್ರದ ನೀಲೀ ಬಣ್ಣದ ಮೇಲೆ ಬೆಳದಿಂಗಳು ಬಿದ್ದು ಅಪೂರ್ವ ಶೋಭೆಯನ್ನು ಎಬ್ಬಿಸಿದ್ದಿತು. ವರಲಿ ಬೀಚಿನ ದೀಪಮಾಲೆಯು ದೂರದಲ್ಲಿ ಕಂಗೊಳಿಸುತ್ತಿದ್ದಿತು.

ಭಟ್ಟನು ಲಕ್ಷ್ಮಿಯ ಕಡೆತಿರುಗಿ "ಈ ಬೆಳದಿಂಗಳು ಎಷ್ಟು ಮನೋಹರವಾಗಿದೆ! ಸಮುದ್ರದ ಮೇಲೆ ಬೋಟಿನಲ್ಲಿ ಕುಳಿತು, ಸಮುದ್ರದ ಮಧ್ಯಕ್ಕೆ ಹೋಗಿ ಈ ಚಂದ್ರಿಕೆಯ ಸೊಗಸನ್ನು ಅನುಭವಿಸಬೇಕೆನ್ನಿಸುತ್ತದೆ" ಎಂದನು.

ಲಕ್ಷ್ಮಿಯು ತಲೆಯಾಡಿಸಿ "ಸರಿ! ಸರಿ! ನಿಮ್ಮ ವರ್ಣನೆಯು ಸಾಕು! ಸಮುದ್ರ, ಬೆಳದಿಂಗಳು, ನೌಕಾವಿಹಾರ ಇವೆಲ್ಲವನ್ನೂ ಬಣ್ಣಿಸಿ,ನೀವು ಕವಿಗಳಾಗುತ್ತಿದ್ದೀರಿ" ಎಂದು ಹಾಸ್ಯ ಮಾಡಿದಳು.

ಭಟ್ಟನು ಲಕ್ಷ್ಮಿಯ ಬೆನ್ನು ಮೇಲೆ ಕೈ ಆಡಿಸುತ್ತಾ, " ಲಕ್ಷ್ಮಿ, ಒಮ್ಮೆ ರಾಗಾಲಾಪನೆ ಮಾಡು ನೋಡೋಣ " ಎಂದನು.

ಲಕ್ಷ್ಮಿಯು" ಚೆನ್ನಾಯಿತು. ಇದೇನು ಸಿನಿಮಾ ಎಂದುಕೊಂಡಿರಾ? ಅತ್ತ ಸಮುದ್ರ. ಇತ್ತ ಈ ಪುಷ್ಪರಾಶಿ. ಮೇಲೆ ಬೆಳದಿಂಗಳು. ಈ ಶಿಲಾತಲ ದಲ್ಲಿ ಕುಳಿತು ನಾನು ಹಾಡುವುದು. ಇದೆಲ್ಲಾ ನಾಟಕವೇನು ? ನನಗೆ ನಾಚಿಕೆಯಾಗುತ್ತದೆ " ಎಂದಳು.

ಭಟ್ಟನು " ಅದೂ ಒಂದು ಸೊಗಸು ! ನಿನ್ನ ನಾಚಿದ ಮುಖವೂ ಎಷ್ಟೋ ಶೋಭಾಯಮಾನವಾಗಿರುತ್ತದೆ " ಎಂದನು.

ಲಕ್ಷ್ಮಿಯು "ಸಾಕು! ನನ್ನ ವರ್ಣನೆಯು ಸಾಕು. ನಿಮ್ಮ ಸಿನೀಮಾ ಚಿತ್ರಪಟದ ವಿಚಾರವೇನಾಯಿತು ?" ಎಂದಳು.

ಭಟ್ಟನು " ಅದೇ, ಮರತೇ ಬಿಟ್ಟೆ ! ಈ ದಿನ ಮಧ್ಯಾಹ್ನ ಕಾಗದ ಬಂದಿದೆ. ನಮ್ಮ ವಿಜಯನು ತಿರುವಣ್ಣಾ ಮಲೆಯಲ್ಲಿ ರಮಣ ಮಹರ್ಷಿ ಗಳ ಆಶ್ರಮದಲ್ಲಿದ್ದಾನಂತೆ. ಮಣಿ ಅಲ್ಲಿಗೆ ಹೋಗಿ ಕಾಗದ ಬರೆದಿದ್ದಾನೆ. ವಿಜಯನನ್ನು ಬೊಂಬಾಯಿಗೆ ಬರಬೇಕೆಂದು ಮಣಿಯು ಕೇಳಿದನಂತೆ ! ವಿಜಯನು " ಮಹರ್ಷಿಗಳ ಅಪ್ಪಣೆ ಪಡೆದು ಬರುತ್ತೇನೆ" ಎಂದು ಹೇಳಿದ ನಂತೆ. ಮಣಿಯು ಅಲ್ಲಿಯೇ ಕಾದಿದ್ದಾನೆ. ವಿಜಯನು ಶೀಘ್ರವಾಗಿಯೇ ಬಂದು ಬಿಡಬಹುದು. ಆ ಮೇಲೆ ಚಿತ್ರಪಟದ ತಯಾರಿಕೆಗೆ ಆರಂಭವಾಗು ತ್ತದೆ " ಎಂದು ಹೇಳಿದನು.

" ನಿಮ್ಮ ಸ್ನೇಹಿತರು ವಿಜಯೇಂದ್ರ ರಾಯರು ವಿಚಿತ್ರ ಪುರುಷರಾಗಿ ದ್ದಾರೆ. ಚಿತ್ರಪಟ ನಿರ್ಮಾಣವೆಲ್ಲಿ ? ರಮಣ ಮಹರ್ಷಿಗಳೆಲ್ಲಿ ? ಅವರು ದೊಡ್ಡ ವೇದಾಂತಿಗಳೆಂದು ಕೇಳಿದ್ದೇನೆ. ಅವರೇಕೆ ಚಿತ್ರಪಟ ನಿರ್ಮಾಣಕ್ಕೆ ಅಪ್ಪಣೆ ಕೊಡುತ್ತಾರೆ ? ' ನಮ್ಮಂತೆ ಪ್ರಪಂಚದಿಂದ ದೂರವಾಗಿರು !" ಎಂದು ಅವರು ಆಶೀರ್ವಾದ ಮಾಡಬಹುದು "

"ಲಕ್ಷ್ಮೀ ! ಅದೇ ನಿನಗೆ ತಿಳಿಯದ ವಿಷಯ ! ರಮಣ ಮಹರ್ಷಿಗಳು ವೇದಾಂತಿಗಳೋ, ಪವಾಡ ಪುರುಷರೋ, ನಾನರಿಯೆ. ಆದರೆ ಇಂತಹ ದೊಡ್ಡವರೆಲ್ಲಾ ಅವರವರ ಮನೋವೃತ್ತಿಗೆ ತಕ್ಕಹಾಗೆಯೇ ಆಶೀರ್ವಾದ ಮಾಡುತ್ತಾರೆ "

" ವಿಜಯೇಂದ್ರ ರಾಯರ ರೀತಿಯೇ ವಿಚಿತ್ರವಾಗಿವೆ. ನೀವು ಅವರನ್ನು ನಂಬಿಕೊಂಡು ಚಿತ್ರಪಟ ನಿರ್ಮಾಣಕ್ಕೆ ಕೈ ಹಚ್ಚುತ್ತೀರಿ.

ಲಕ್ಷಾಂತರ ರೂಪಾಯಿಗಳನ್ನು ವೆಚ್ಚ ಮಾಡುತ್ತೀರಿ. ಇದರಲ್ಲಿ ನಿಮಗೆ ಪೂರ್ಣ ನಂಬಿಕೆ ಇದೆಯೋ?"

"ಲಕ್ಷ್ಮೀ! ನಂಬಿಕೆ ಎಂಬ ಮಾತು ಬಹಳ ಹಗುರವಾದುದು. ವಿಜಯೇಂದ್ರನೂ ನಾನೂ ಬಾಲ್ಯದಿಂದ ಗೆಳೆಯರು. ಒಬ್ಬರಿಗೊಬ್ಬರು ಪ್ರಾಣವನ್ನೊಪ್ಪಿಸುವ ಸ್ನೇಹಿತರು. ನಾವಿಬ್ಬರೂ ಈ ಚಿತ್ರಪಟ ನಿರ್ಮಾಣದ ವಿಷಯದಲ್ಲಿ ಎಷ್ಟೋ ದಿನಗಳು ಆಲೋಚನೆ ಮಾಡಿದ್ದೇವೆ. ನಮ್ಮ ಜಯವು ಖಂಡಿತ"

"ನಿಮ್ಮ ಚಿತ್ರಪಟವು ನಿರ್ಮಾಣವಾಗಲಿ. ಯಶಸ್ವಿಯಾಗಲಿ. ಆದರೆ ವೇದಾಂತಿಗಳೂ, ವಿರಕ್ತರೂ, ಸನ್ಯಾಸಿಗಳೂ ಚಿತ್ರಪಟ ಮಾಡುವುದನ್ನು ನಾನೆಲ್ಲಿಯೂ ಕಂಡು ಕೇಳಿಲ್ಲ?

"ಆಗಲಿ! ವಿಜಯನು ಬರಲಿ. ನಾನು ಹೇಳುತ್ತೇನೆ. ಲಕ್ಷ್ಮೀ ದೇವಿಯವರು ಚಿತ್ರಪಟ ನಿರ್ಮಾಣವನ್ನು ಒಪ್ಪುವುದಿಲ್ಲ–ಎಂದು ಹೇಳುತ್ತೇನೆ"

"ಆಗಲಿ, ನಾನೂ ಹೇಳುತ್ತೇನೆ. ಸ್ಥಿರ ಬುದ್ಧಿ ಇಲ್ಲದವರ ಯಾವ ಕೆಲಸವೂ ಸಫಲವಾಗುವುದಿಲ್ಲವೆಂದು"

"ನಾವಿಬ್ಬರೂ ಪಂಥ ಕಟ್ಟೋಣವೇ?"

"ಪಂಥವೇಕೆ? ಎಂದು ತಾನೇ ನಾನು ಪಂಥ ಕಟ್ಟಿ ಗೆದ್ದಿದ್ದೇನೆ. ಪಂಥ ಕಟ್ಟಿದರೂ ನಿಮಗೇ ಜಯ, ಇಲ್ಲದಿದ್ದರೂ ನಿಮಗೇ ಜಯ"

"ಹೌದು! ಲಕ್ಷ್ಮಿ. ನಿನ್ನ ಪ್ರೇಮವನ್ನೇ ನಾನು ಜಯಿಸಿದ್ದೇನೆ. ನನಗೆ ಅಪಜಯವೆಲ್ಲಿ ಬಂತು?" ಎಂದು ಲಕ್ಷ್ಮಿಯನ್ನು ಆಲಂಗಿಸಿದನು.

ಪ್ರಾತಃಕಾಲ. ಸುಮಾರು ಎಂಟು ಗಂಟೆ ಸಮಯ. ಸೂರ್ಯನ ಪ್ರಖರ ಕಿರಣಗಳು ಎಲ್ಲೆಡೆಯಲ್ಲಿಯೂ ಪ್ರಕಾಶ ಮಾನವಾಗಿದ್ದುವು. ಭಟ್ಟನು ಬಟ್ಟೆಗಳನ್ನು ಧರಿಸಿ ಹೊರಡುವ ಗಡಿಬಿಡಿಯಲ್ಲಿದ್ದನು. ಲಕ್ಷ್ಮಿಯು ಚಹಾ ಬಟ್ಟಲನ್ನು ಕೈಲಿ ಹಿಡಿದು, "ಸ್ವಲ್ಪ ಚಹಾ ತೆಗೆದುಕೊಳ್ಳಿರಿ!" ಎಂದು ಭಟ್ಟನನ್ನು ಉಪಚರಿಸುತ್ತಿದ್ದಳು.

ಲಕ್ಷ್ಮೀ ನಿವಾಸದ ಹೊರಗಡೆ ಟ್ಯಾಕ್ಸಿಯು ಬಂದು ನಿಂತಿತು. ಆ

ಗಾಡಿಯಿಂದ ಇಬ್ಬರು ಇಳಿದು ಬಂದರು. ಮನೆಯ ಹೊರ ಬಾಗಿಲು ತೆರೆದೇ ಇದ್ದಿತು. ಆಗಂತುಕರಿಬ್ಬರೂ ಲಕ್ಷ್ಮೀ ನಿವಾಸದ ಹಜಾರದಲ್ಲಿ ಬಂದು ನಿಂತರು. ಅವರಲ್ಲೊಬ್ಬನು ಭಟ್ಟನ ಆಪ್ತ ಶಿಷ್ಯ ಮಣಿ ! ಭಟ್ಟನು ಅತ್ತಕಡೆ ತಿರುಗಿ ನೋಡಿದನು. ಸಂತೋಷದಿಂದ ಮುಂದೆ ಬಂದು ಮತ್ತೊಬ್ಬ ಆಗಂತುಕನನ್ನು ಆ ಲಿ ಂ ಗಿ ಸಿ ದ ನು. ಲಕ್ಷ್ಮಿಯು ಚಕಿತಳಾಗಿ ಅವರಿಬ್ಬರನ್ನೂ ನೋಡಿದಳು. ಆಗಂತುಕನು ವಿಜಯೇಂದ್ರ ರಾಯ.

ಲಕ್ಷ್ಮಿಯು ಮಣಿಯ ಕಡೆ ತಿರುಗಿ " ಮಣಿ. ಇದೇನು ? ಏಕಾ ಏಕೀ ಬಂದುಬಿಟ್ಟಿರಿ ? ಹೊರಟವರು ಒಂದು ತಂತಿ ಕೊಡಬಾರದೇ ? ನಾವು ರೈಲು ಸ್ಟೇಷನ್‌ಗೆ ಬಂದು ಕರತರುತ್ತಿದ್ದೆವು " ಎಂದಳು.

ಮಣಿಯು "ಲಕ್ಷ್ಮೀ ದೇವಿ ! ವಿಜಯೇಂದ್ರ ರಾಯರದು ಯಾವುದು ತಾನೆ ನಿಶ್ಚಯ ? ಅವರನ್ನು ಕರತರುವುದು ಭೀಮನು ಪುರುಷಾಮೃಗವನ್ನು ಕರತಂದಂತಾಯಿತು " ಎಂದು ಲಕ್ಷ್ಮೀ ದೇವಿಯ ಕಿವಿಯಲ್ಲಿ ಹೇಳಿದನು.

ಲಕ್ಷ್ಮಿಯು ನಕ್ಕಳು.

ಭಟ್ಟನೂ ವಿಜಯನೂ, ಸೋಫಾದ ಮೇಲೆ ಕುಳಿತರು. ಮಣಿಯು ಒಳಗೆ ಹೋಗಿ ಇಬ್ಬರಿಗೂ ಚಹಾ ತಂದುಕೊಟ್ಟನು.

ವಿಜಯನು ಚಹಾ ರುಚಿ ನೋಡುತ್ತಾ "ಲಕ್ಷ್ಮೀ ದೇವಿ. ನಿಮ್ಮಗಳ ದರ್ಶನಕ್ಕಾಗಿ ಬಂದೇ ಬಿಟ್ಟೆ. ನಿಮ್ಮನ್ನು ನೋಡಿ ನನಗೆ ಅತ್ಯಾನಂದ ವಾಯಿತು " ಎಂದನು.

ಲಕ್ಷ್ಮಿಯು ಕೈ ಮುಗಿದು " ನಾವು ನಿಮ್ಮ ಆಗಮನವನ್ನೇ ನಿರೀಕ್ಷಿಸುತ್ತಿದ್ದೆವು. ನೀವು ಇಷ್ಟು ದಿನ ಎಲ್ಲಿ ಅಂತರ್ಧಾನವಾಗಿದ್ದಿರಿ ?" ಎಂದಳು.

ವಿಜಯನು ಚಹಾ ಪೂರೈಸಿ "ಮಣಿ. ಮತ್ತೊಂದು ಬಟ್ಟಲು ಚಹಾ ಕೊಡು" ಎಂದು ಕೇಳಿದನು.

ಲಕ್ಷ್ಮಿಯು ಒಳಗೆ ಹೋಗಿ ಚಹಾ ತಂದು ಕೊಟ್ಟಳು.

ವಿ ಜ ಯ ನು ಚಹಾ ಆಸ್ವಾದಿಸುತ್ತಾ " ಲಕ್ಷ್ಮೀ ದೇವಿ ! ನಾನು

ಎಲ್ಲಿದ್ದೆನೋ, ಏನು ಮಾಡುತ್ತಿದ್ದೆನೋ, ಅದರಲ್ಲೆಲ್ಲಾ ಹೇಳುವಂತಹುದೇನೂ ಇಲ್ಲ. ರಮಣ ಮಹರ್ಷಿಗಳ ಆಶ್ರಮದಲ್ಲಿದ್ದೆ" ಎಂದನು.

ಲಕ್ಷ್ಮಿಯು "ಅಲ್ಲಿ ನಿಮ್ಮ ಮನಸ್ಸು ಆನಂದವಾಗಿತ್ತಲ್ಲವೆ?" ಎಂದಳು.

ವಿಜಯನು " ಲಕ್ಷ್ಮೀ ದೇವಿ. ಈಗ ಇಲ್ಲಿ ಈ ಮನೆಯಲ್ಲಿ ನಿಮ್ಮಗಳೊಡನೆ ಇರುವಷ್ಟು ಆನಂದವು ನನಗೆಲ್ಲಿಯೂ ಇರಲಿಲ್ಲ. ಮಣಿಯು ನನ್ನ ಜೊತೆಯಲ್ಲಿ ಸುಮಾರು ಹತ್ತು ಹನ್ನೆರಡು ದಿನಗಳಿದ್ದನು. ಅವನು ಈ ಮನೆಯು ಹೇಗಿದೆಯೆಂದು ಹೇಳಿದನು. ನೀವು ದಂಪತಿಗಳು ಹೇಗಿದ್ದೀರೆಂದು ಹೇಳಿದನು.ಅದನ್ನೇ ಇಲ್ಲಿಪ್ರತ್ಯಕ್ಷವಾಗಿ ನೋಡುತ್ತಿದ್ದೇನೆ"ಎಂದನು.

ಮಣಿಯು ಬಂದು " ವಿಜಯೇಂದ್ರರಾಯರು ಸ್ನಾನಕ್ಕೆ ಏಳಲಿ. ಸ್ನಾನ, ಭೋಜನ, ವಿಶ್ರಾಂತಿಗಳಾದ ಮೇಲೆ ಮಾತು ಕಥೆಗಳಾಗಬಹುದಲ್ಲಾ"ಎಂದನು.

ವಿಜಯೇಂದ್ರ ರಾಯನೂ, ಭಟ್ಟನೂ ಎದ್ದರು. ಲಕ್ಷ್ಮಿಯು ಮಹಡಿಯ ಮೇಲೆ ತನ್ನ ಕೋಣೆಗೆ ಹೋದಳು.

ಭಟ್ಟನು ಭೋಜನೋತ್ತರ ವಿಜಯನಿಗೆ ಮನೆಯನ್ನೆಲ್ಲಾ ತೋರಿಸಿದನು. ವಿಜಯನು " ಮನೆಯು ಬಹಳ ಚೆನ್ನಾಗಿದೆ. ಅಲಂಕಾರವು ಅದಕ್ಕಿಂತಲೂ ಸೊಗಸಾಗಿದೆ " ಎಂದು ಹೇಳಿ ಮೆಚ್ಚಿಗೆಯನ್ನು ವ್ಯಕ್ತಪಡಿಸಿದನು.

ಇಬ್ಬರೂ ಮಹಡಿಯ ಮೇಲೆ ಪಂಕಾದ ಗಾಳಿಯೆಡೆಯಲ್ಲಿ ಕುಳಿತು ಮಾತಿಗೆ ಮೊದಲು ಮಾಡಿದರು.

ಭಟ್ಟನು ಮನೆಯನ್ನು ಪ್ರಭುರಾಜ್‌ನು ಕೊಂಡು ಕೊಟ್ಟನೆಂದೂ, ಗೃಹಾಲಂಕಾರವೆಲ್ಲವೂ ಕಲ್ಯಾಣಿಯ ಕೈವಾಡವೆಂದೂ ಹೇಳಿದನು. ಲಕ್ಷ್ಮಿಯು ಆನಂದದಿಂದ ಇದ್ದಾಳೆಂದು ತಿಳಿಸಿದನು.

ಕವಿಯು "ಬಹಳ ಸಂತೋಷ. ಈಜಗತ್ತಿನಲ್ಲಿ ನಿನ್ನಂತಅದೃಷ್ಟಶಾಲಿಗಳಿಗೆ ಹೇಗಿರಬೇಕೋ ಅದೆಲ್ಲಾ ಪ್ರತ್ಯಕ್ಷವಾಗಿದೆ. ಆದರೆ ಇದೇಜಗತ್ತಿನಲ್ಲಿ ಬಡತನ, ಕಷ್ಟ, ಹೊಟ್ಟೆಗಿಲ್ಲದಪಾಡು, ಅಜ್ಞಾನಗಳು ಮತ್ತೊಂದೆಡೆ ತುಂಬಿ ತುಳುಕುತ್ತಿವೆ. ನೋಡು, ಭಟ್ಟ. ಈ ಐಶ್ವರ್ಯವಂತರ ಸುಖದ ಬದುಕು, ಆ ಬಡ ಜನರ ಕಷ್ಟದ ಬಾಳು, ಇವೆರಡೂ ವಿಶ್ವ ಸೃಷ್ಟಿಯನ್ನು ಕಲಕು

ತ್ತಿವೆ. ಇವೆರಡಕ್ಕೂ ದಿವ್ಯೌಷಧ ಉಂಟು. ಅದು ಜ್ಞಾನ. ಅದನ್ನೇ ನಾನು ಮಹರ್ಷಿಗಳ ಆಶ್ರಮದಲ್ಲಿ ಮಾಡುತ್ತಿದ್ದ ಪರಿಶೋಧನೆ" ಎಂದು ಹೇಳಿದನು.

ಭಟ್ಟನು ದಿಗ್ಭ್ರಮೆ ಹಿಡಿದಂತಾದನು. "ಮಿತ್ರ, ವಿಜಯ. ನೀನು ಕವಿ, ಗ್ರಂಥಕರ್ತ. ಭಾವನಾ ಪ್ರಪಂಚದಲ್ಲಿ ಮುಳುಗಿದವನು. ಒಳ್ಳೆಯ ಉಪನ್ಯಾಸ ಮಾಡಿದೆ. ಅಥವಾ ಉಪದೇಶ ಮಾಡಿದೆ—ಎಂದುಕೊಳ್ಳೋಣ. ಈ ಜಗತ್ತಿನಲ್ಲೆಲ್ಲಾ ರಮಣ ಮಹರ್ಷಿಗಳ ಆಶ್ರಮಗಳನ್ನೇ ಮಾಡಿಬಿಡಲು ಸಾಧ್ಯವೇ ? ಎಲ್ಲರೂ ರಮಣ ಮಹರ್ಷಿಗಳಂತೆ ಆಗಿಬಿಡಬಲ್ಲರೇ ? ಅಂಥದೊಂದು ಜಗತ್ತನ್ನು ಊಹಾ ಕಲ್ಪನೆಯಿಂದ ನೋಡು. ಅದೇ ಸೃಷ್ಟಿಯ ಪರಿಪೂರ್ಣತೆಯೆಂದು ಕೊಂಡಿದ್ದೀಯಾ ?" ಎಂದನು.

ಕವಿಯು "ಅದು ನಿಜ. ಅದನ್ನು ನಾನು ಬಲ್ಲೆ. ಪ್ರಪಂಚಕ್ಕೆಲ್ಲಾ ಮುಕ್ತಿಯ ಮೆಟ್ಟಲುಗಳನ್ನು ನಾನು ಕಟ್ಟುತ್ತಿಲ್ಲ. ರಮಣ ಮಹರ್ಷಿಗಳೂ ಕಟ್ಟಿ ಸಿದ್ಧಪಾಗಿಟ್ಟಿಲ್ಲ. ನೀನು ಈ ಮನೋರಥಗಳಿಂದ ಈ ಪ್ರಸಾದವನ್ನು ಕಟ್ಟಿಕೊಂಡು, ಮನೆಯಲ್ಲಿಯೇ ಈ ಸಣ್ಣ ಆರಾಮ ಲತಾಗೃಹಗಳನ್ನು ನಿರ್ಮಿಸಿಕೊಂಡು, ಈ ಲಕ್ಷ್ಮೀದೇವಿಯ ಅನುಗ್ರಹವನ್ನು ಪಡೆದು ಸಂತೋಷದಿಂದಿರುವುದನ್ನು ಇಲ್ಲಿ ಪ್ರತ್ಯಕ್ಷವಾಗಿ ಕಾಣುತ್ತಿದ್ದೇನೆ. ಅಲ್ಲಿ ಗಿರಿಯ ಮೇಲಿದ್ದುಕೊಂಡು ಪರಜ್ಯೋತಿಯ ಧ್ಯಾನದಲ್ಲಿಯೇ ಮುಳುಗಿ ಆನಂದಾಶ್ರುಗಳನ್ನು ಸುರಿಸುತ್ತಿರುವ ನಿರ್ವಿಕಲ್ಪಕ ಜೀವನದ ಆದರ್ಶವನ್ನು ನೋಡಿದ್ದೇನೆ. ನನಗೆ ಮಾತ್ರ ಆ ಮಾರ್ಗವು ಅಮೃತಮಯವಾಗಿ ಕಾಣುತ್ತದೆ. ಅಲ್ಲಿಂದ ಪಾಶ ಹಾಕಿ ನನ್ನನ್ನೇಕೆ ಇಲ್ಲಿಗೆ ಎಳೆತಂದಿರುವೆ ?" ಎಂದು ಕೇಳಿದನು.

ಭಟ್ಟನಿಗೆ ಆಶ್ಚರ್ಯವಾಯಿತು.

"ವಿಜಯ, ಏಕೆ ಕರೆತಂದೆನೋ ನಾನರಿಯೆ. ಆದರೆ ನನ್ನ ಈ ಸಂಸಾರವು ನೀನಿಲ್ಲದೇ ಬೆಳಕಾಗುವುದಿಲ್ಲ. ನಿನ್ನ ಸ್ನೇಹಕ್ಕೆ ನಾನಷ್ಟು ಬೆಲೆ ಕೊಟ್ಟಿದ್ದೇನೆ. ಅದಕ್ಕಾಗಿ ಕರೆತಂದೆ" ಎಂದು ಹೇಳಿದನು.

ವಿಜಯನು "ನಾನೆಲ್ಲಿದ್ದರೂ ನಿನ್ನನ್ನು ಮರೆಯುವುದಿಲ್ಲ. ಆದರೆ ನನ್ನ ಮನಸ್ಸು ಮಾತ್ರ ಆ ಮಾರ್ಗವನ್ನು ಹಿಡಿದಿದೆ" ಎಂದನು.

ಭಟ್ಟನಿಗೆ ವಿಜಯನ ಮೇಲೆ ವಿಪರೀತವಾದ ಮನಃಪರಿಣಾಮ ಉಂಟಾಗಿದೆ. ಭಾವುಕರ ಚಿತ್ತವೃತ್ತಿಯೇ ಹೀಗೆ ಎಂದುಕೊಂಡನು. ಮಹಡಿಯ ಮೇಲೆ ಕಲ್ಯಾಣಿಗೆ ಯಾವ ಕೊಠಡಿಗಳು ಸಿದ್ಧಪಡಿಸಲ್ಪಟ್ಟಿದ್ದವೋ ಅದೇ ಕೊಠಡಿಗಳನ್ನು ಲಕ್ಷ್ಮೀ ದೇವಿಯು ವಿಜಯನಿಗೆ ಅಣಿಮಾಡಿಸಿದಳು. ಆವಳು ಪತಿಯೊಡನೆ ಮಾತನಾಡುತ್ತಿದ್ದ ವಿಜಯನ ಹತ್ತಿರ ಬಂದು "ನಿಮ್ಮ ಸಾಮಾನುಗಳೆಲ್ಲಿವೆ?" ಎಂದು ಕೇಳಿದಳು.

ವಿಜಯನು ತನ್ನ ಮೈಮೇಲಿದ್ದ ಬಟ್ಟೆಗಳನ್ನು ತೋರಿಸಿ, "ಇಷ್ಟೆ ನನ್ನ ಸಾಮಾನುಗಳು" ಎಂದು ಹೇಳಿದನು.

ಲಕ್ಷ್ಮಿಗೆ ಆಶ್ಚರ್ಯವಾಯಿತು. ಅವಳು "ಕವಿರಾಜ, ನೀವು ಮದರಾಸಿನಿಂದ ಹೊರಡುವಾಗ ಹಾಸಿಗೆ, ಅಷ್ಟೊಂದು ಬಟ್ಟೆಗಳು, ಪುಸ್ತಕಗಳು ಎರಡು ಚರ್ಮದ ಪೆಟ್ಟಿಗೆಗಳು ಎಲ್ಲವನ್ನೂ ತೆಗೆದುಕೊಂಡು ಹೋಗಿದ್ದಿರಲ್ಲಾ. ಅದನ್ನೆಲ್ಲಾ ಎಲ್ಲಿ ಬಿಟ್ಟು ಬಂದಿರಿ?" ಎಂದು ಕೇಳಿದಳು.

ಭಟ್ಟನು ನಗುತ್ತಾ "ಅದನ್ನೆಲ್ಲಾ ರಮಣ ಮಹರ್ಷಿಗಳ ಉಪದೇಶದಿಂದ ದಾನ ಮಾಡಿಬಿಟ್ಟ. ಇಲ್ಲಿ ಎಲ್ಲವನ್ನೂ ನಾನು ಹೊಸದಾಗಿ ತಂದು ಕೊಡುತ್ತೇನೆ. ಗೀತೆಯಲ್ಲಿ ಹೇಳಲಿಲ್ಲವೆ? "ಜೀರ್ಣಾನಿ ವಸ್ತ್ರಾಣಿ ಯಥಾ ವಿಹಾಯ, ನವಾನಿ ಗೃಹ್ಣಾತಿ ನರೋಽಪರಾಣಿ" ಹಳೆಯದನ್ನು ಬಿಸಾಡಿ ಹೊಸದನ್ನು ಸ್ವೀಕರಿಸಬೇಕೆಂದು ಗೀತಾಚಾರ್ಯನೇ ಹೇಳಿದ್ದಾನೆ. ನಮ್ಮ ವೇದಾಂತಿಗೂ ಅದೇ ಉಪದೇಶ" ಎಂದು ನಕ್ಕನು.

ಲಕ್ಷ್ಮಿಯು "ರಮಣ ಮಹರ್ಷಿಗಳು ಬಟ್ಟೆ ಬರೆಗಳನ್ನೆಲ್ಲಾ ಕೊಟ್ಟು ಬಿಡಬೇಕೆಂದು ಉಪದೇಶ ಮಾಡುತ್ತಾರೇನು?" ಎಂದಳು.

ವಿಜಯನು "ಇದೇನು ಲಕ್ಷ್ಮೀ ದೇವಿ. ಭಟ್ಟನಂತೆ ನೀವೂ ಹುಚ್ಚರಾಗಿದ್ದಿರೇನು? ನಾನು ಮದರಾಸಿನಿಂದ ಬೆಂಗಳೂರಿಗೆ ಹೋದಾಗ ಬಹಳ ಅಸ್ವಸ್ಥನಾಗಿದ್ದೆ. ನಿಮಗೆ ಹೇಳಲಿಲ್ಲ. ಬೆಂಗಳೂರಿಗೆ ಹೋಗಿ ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಮಲಗಿದೆ. ವ್ಯಾಧಿಯು ಪ್ರಬಲವಾಯಿತು. ಡಾಕ್ಟರುಗಳಿಗೆ ನನ್ನ ಕಾಯಿಲೆಯೇ ತಿಳಿಯಲಿಲ್ಲವೆಂದು ನಾನೆಂದುಕೊಂಡೆ. ಜ್ವರ ವೇಗವು ತೀವ್ರವಾಗಿದ್ದಿತು. ನಾನೇ ಯಾವುಯಾವುದೋ ಕಾಹಿಲೆಗಳನ್ನು

೨

ವಿಜಯನು ತನ್ನ ಕೋಣೆಗೆ ಹೋಗಿ ವಿಶ್ರಮಿಸಿಕೊಂಡನು.

ಸಾಯಂಕಾಲ ಐದು ಗಂಟೆಯ ಸಮಯವಿರಬಹುದು. ಭಟ್ಟನು ವಿಜಯನನ್ನು ಕರೆಯುತ್ತಾ ಕೋಣೆಯಿಂದ ಬಂದನು. ಲಕ್ಷ್ಮಿಯು ಕಾಫಿ ಟಿಫಿನ್ ತಂದಿಟ್ಟಳು. ಭಟ್ಟನು " ಹೊರಡಯ್ಯಾ, ವಿಜಯ. ಹೋಗಿ ಬರೋಣ " ಎಂದು ಹೇಳುತ್ತಾ ವಿಜಯನನ್ನು ಕರೆದುಕೊಂಡು ಕೆಳಗಿಳಿದನು. ಲಕ್ಷ್ಮಿಯು ಹೊರಕ್ಕೆ ಹೊರಡಲು ಸಿದ್ಧಳಾಗಿ ಬಂದಳು.

ಕಾರಿನಲ್ಲಿ ಕುಳಿತುಕೊಂಡು ಹೊರಟರು. ಕಾರು ಮೆರೀನ್ ಡ್ರೈವ್ ಮಾರ್ಗವಾಗಿ ಹೋಗುತ್ತಿತ್ತು. ಚೌಪಾತಿಯಲ್ಲಿ ಲಕ್ಷಾಂತರ ಜನರ ಸಭೆಯು ಕೂಡಿತ್ತು. ಉಪನ್ಯಾಸಕರು ಎತ್ತರವಾದ ವೇದಿಕೆಯ ಮೇಲೆ ನಿಂತು ಭಾಷಣ ಮಾಡುತ್ತಿದ್ದರು.

ಭಟ್ಟನು " ಇದೇನೋ ಭಾರಿ ಸಭೆ ಸೇರಿದೆ. ಉಪನ್ಯಾಸ ನಡೆಯುತ್ತಿದೆ, ಹೋಗಿ ನೋಡೋಣವೆ ?" ಎಂದನು.

ವಿಜಯನು " ಲಕ್ಷ್ಮೀದೇವಿಯು ಕಾರಿನಲ್ಲೇ ಕುಳಿತಿರಲಿ. ಬಹಳ ಗದ್ದಲ. ನಾವಿಬ್ಬರೇ ಹೋಗಿ ಬರೋಣ. ಈವತ್ತು ಲೋಕಮಾನ್ಯನ ಪುಣ್ಯ ದಿನ. ಅದಕ್ಕಾಗಿ ಸಭೆ ಸೇರಿದೆ " ಎಂದು ಹೇಳಿದನು.

ಇಬ್ಬರೂ ಇಳಿದು ಸಭೆಗೆ ಹೋದರು. ಉಪನ್ಯಾಸವು ಪೂರೈಸಿತು. ಜಯಕಾರಗಳಾಗುತ್ತಿತ್ತು. ಜನರು ತಂಡ ತಂಡವಾಗಿ ಹೊರಡುತ್ತಿದ್ದರು.

ಅತಿ ಪ್ರಯಾಸದಿಂದ ವಿಜಯನೂ, ಭಟ್ಟನೂ ಬಂದು ಕಾರಿನಲ್ಲಿ ಕುಳಿತುಕೊಂಡರು.

ಭಟ್ಟನು "ಕವಿರಾಜ, ಈ ಮಹಾ ಪುರುಷನು ಇಂದು ಇದ್ದಿದ್ದರೆ ಹೇಗಿರುತ್ತಿದ್ದಿತು ?" ಎಂದನು.

ವಿಜಯನು "ಇದೇನು ಭಟ್ಟ. ಹೀಗೆ ಮಾತನಾಡುವಿ ? ಭಗವಂತನ ಇಚ್ಛೆ ! ಅಂದು ಲೋಕಮಾನ್ಯರು—ಇಂದು ಮಹಾತ್ಮರು. ಅದೇ ವಿಧಿ ವಿಲಾಸ" ಎಂದು ಹೇಳಿದನು. ಪುನಃ "ನೋಡು ಭಟ್ಟ, ನಮಗೆ ಆ ತಿಲಕರನ್ನು ನೋಡುವ ಭಾಗ್ಯವಿಲ್ಲ. ಅಂತಹ ರಾಜಕಾರಣಿಗಳೂ, ವಿದ್ವಾಂಸರೂ ಹುಟ್ಟುವುದು ಅಪರೂಪ. ಮನುಷ್ಯ ಜನ್ಮವೆತ್ತಿದರೆ ಅವರಂತೆ ಮಹಾ ತ್ಯಾಗಿಯಾಗಿ ಬದುಕಬೇಕು. ಸತ್ತರೂ ಹಾಗೆಯೇ ದೇಶಕ್ಕಾಗಿ ಸಾಯಬೇಕು. ಅಂತಹ ಮಹಾ ಪುರುಷರಿಗೆ ಜೀವನ ಮರಣಗಳ ವ್ಯತ್ಯಾಸವೇ ಇಲ್ಲ" ಎಂದನು.

ಭಟ್ಟನು "ಹಾಗೆಂದರೇನಯ್ಯಾ?" ಎಂದು ಆಶ್ಚರ್ಯದಿಂದ ಕೇಳಿದನು.

"ಏನೂ ಇಲ್ಲ, ಅವರು ಸತ್ತರೂ ಬದುಕಿದ್ದಂತೆಯೇ, ಅದೇ ಪುಣ್ಯ ಪುರುಷರ ಜೀವನ ರಹಸ್ಯ"

ಭಟ್ಟನು "ನೀನೂ ಒಂದು ದಿನ ಹಾಗಾಗುವೆಯೋ ಏನೋ ಯಾರು ಬಲ್ಲರು" ಎಂದನು.

ವಿಜಯನು ಮೌನವಾಗಿದ್ದನು.

ಭಟ್ಟನು "ಲಕ್ಷ್ಮಿ. ನೀನೂ ಭಾಷಣ ಕೇಳಿದೆಯಾ ?" ಎಂದನು.

ಲಕ್ಷ್ಮಿಯು "ಹೌದು. ನನಗೂ ಕೇಳಿಸುತ್ತಿತ್ತು" ಎಂದು ಹೇಳಿದಳು.

ವಿಜಯನು "ನೀನೂ ಕೇಳಿದೆ–ಲಕ್ಷ್ಮಿ ದೇವಿಯೂ ಕೇಳಿದಳು. ನಿಮ್ಮಿಬ್ಬರಿಗೂ ಏನೆನ್ನಿಸಿತು ?" ಎಂದು ಕೇಳಿದನು.

"ಏನೆನ್ನಿಸಬೇಕು? ನಿಜವಾಗಿಯೂ ಏನೂ ಎನ್ನಿಸಲಿಲ್ಲ"

ವಿಜಯನು "ಅಷ್ಟೇ, ಭಟ್ಟ. ಅದಕ್ಕಾಗಿಯೇ ನಮ್ಮ ದೇಶಕ್ಕೆ ಸ್ವರಾಜ್ಯ ಬಂದಿಲ್ಲ. ಲೋಕಮಾನ್ಯರ ತ್ಯಾಗ ಕೇಳಿದರೆ ನಿನಗೇನೂ ಅನ್ನಿಸುವುದಿಲ್ಲ. ಮಹಾತ್ಮರು ಉಪವಾಸ ಮಾಡಿದರೆ ನಿಮಗೇನೂ ಅನ್ನಿಸುವುದಿಲ್ಲ. ಸ್ವರಾಜ್ಯವು ಮಾತ್ರ ಬರಬೇಕು. ನಿಮ್ಮ ದುಡ್ಡು

ಖರ್ಚಾಗ ಕೂಡದು. ನಿಮ್ಮ ಸುಖಕ್ಕೆ ಕೊರತೆಯಾಗ ಕೂಡದು. ನೋಡಯ್ಯಾ, ನಿನ್ನ ರಾಜಕೀಯವು ಇಷ್ಟೆ" ಎಂದನು.

ಭಟ್ಟನು "ವಿಜಯ. ನೀನು ಬರುವಾಗಲೇ ನಮ್ಮ ಮೇಲೇನೋ ಕೋಪಿಸಿಕೊಂಡು ಬಂದಿದ್ದೀ. ಮಾತಿಮಾತಿಗೂ ನಿನ್ನ ವೇದಾಂತವು ನಮಗೆ ಚಾವುಟಿಯ ಪೆಟ್ಟು ಕೊಟ್ಟಂತಿದೆ. ಇದೇನು ವಕ್ರಬುದ್ಧಿ ನಿನ್ನದು!" ಎಂದನು.

ವಿಜಯನು "ವಕ್ರವೆಲ್ಲಿ ಬಂತಯ್ಯಾ? ಲೋಕದ ಕಠಿಣ ಸಮಸ್ಯೆಗಳನ್ನು ನಿನ್ನ ಮುಂದೆ ಬಿಚ್ಚಿಟ್ಟರೆ ನಿನಗೆ ವಕ್ರವಾಗಿ ಕಾಣುತ್ತದೆ. ಬೇಡಪ್ಪಾ, ಬೇಡ. ನಿನಗೆ ಪ್ರಿಯವಾದ ಮಾತುಗಳನ್ನೇ ನುಡಿಯುತ್ತೇನೆ" ಎಂದು ಹೇಳಿದನು.

ಮೂವರೂ ಮನೆಗೆ ಬಂದರು. ಭೋಜನ ಮಾಡಿದರು. ಸ್ವಲ್ಪ ಹೊತ್ತು ಮಾತನಾಡುತ್ತಿದ್ದು ಮಲಗಿದರು.

ಹೀಗೆ ನಾಲ್ಕಾರು ದಿನಗಳು ಕಳೆದವು. ವಿಜಯನು ಸ್ವಲ್ಪ ಸ್ವಲ್ಪ ಬದಲಾವಣೆಯನ್ನು ಹೊಂದಿದನು. ಮೊದಲಿನಂತೆ ಕಾವ್ಯ, ನಾಟಕ, ಸಂಗೀತ, ಸಿನಿಮಾಗಳ ವಿಷಯವನ್ನು ಸ್ವಾರಸ್ಯವಾಗಿ ಮಾತನಾಡ ತೊಡಗಿದನು. ಭಟ್ಟನಿಗೆ ಅದರಿಂದ ಸ್ವಲ್ಪ ಸ್ವಲ್ಪ ಆಪ್ಯಾಯನವಾಗುತ್ತಾ ಬಂದಿತು. ಭಟ್ಟನು ಆಫೀಸಿನ ಕೆಲಸಗಳಲ್ಲಿದ್ದಾಗ ವಿಜಯನೂ, ಲಕ್ಷ್ಮಿಯೂ ಬಹಳ ಹೊತ್ತು ಮಾತುಕತೆಗಳನ್ನಾಡುತ್ತಿದ್ದರು. ಬಡತನ—ಐಶ್ವರ್ಯ, ಕಷ್ಟ—ಸುಖ, ಜ್ಞಾನ—ಅಜ್ಞಾನ ಈ ಸಮಸ್ಯೆಗಳು ಲಕ್ಷ್ಮಿಯ ಮನಸ್ಸಿಗೆ ಪ್ರಿಯಕರವಾಗಿರುತ್ತಿದ್ದವು.

ಭಟ್ಟನು ವಿಜಯನೊಡನೆ ಪ್ರಾತಃಕಾಲದಲ್ಲಿ ಮಾತನಾಡುತ್ತಿದ್ದಾಗ ಹೊಸ ಚಿತ್ರಪಟದ ಮಾತನ್ನೆತ್ತಿದನು. ನಮಗೆ "ಮುಂದಿನ ವರುಷದಲ್ಲಿ ಯಾವ ವ್ಯಾಪಾರವೂ ಇಲ್ಲ. ಯಾವುದಾದರೊಂದು ಚಿತ್ರಪಟವನ್ನು ನಾವು ತಯಾರಿಸಲೇ ಬೇಕು. ಪ್ರಭುರಾಜರವರು ತಗಾದೆ ಮಾಡುತ್ತಿದ್ದಾರೆ" ಎಂದು ಭಟ್ಟನು ಪ್ರಸ್ತಾಪವನ್ನೆತ್ತಿದನು.

ವಿಜಯನು " ಅದಕ್ಕೇನು ? ಯಾವುದಾದರೊಂದು ಪಠವನ್ನು ತಯಾರು ಮಾಡಿಸ ಬಹುದು " ಎಂದು ಹೇಳಿದನು.

ಭಟ್ಟನು " ಹಾಗಲ್ಲವಯ್ಯಾ, ಕಥೆಯು ಸಿದ್ಧವಾಗಬೇಡವೇ ? ನೀನು ಎಲ್ಲವನ್ನೂ ಬಿಟ್ಟು ಕುಳಿತುಕೊಂಡಿದ್ದೀಯೆ, ಕಥೆ ಬರೆಯುವವರಾರು ?" ಎಂದು ಕೇಳಿದನು.

ವಿಜಯನು " ಕಥೆ ಬರೆಯುವವರಿಗೇನು ಕಡಿಮೆ ? ನಿಮ್ಮಂಥಹ ಚಿತ್ರಪಠ ನಿರ್ಮಾಪಕರು ದೊರೆತಾರೇ—ಎಂದು ಎಷ್ಟೋ ಜನ ಕಾದಿದ್ದಾರೆ. ಕವಿಗಳು, ಕಥೆಗಾರರು, ಸಂಗೀತದ ಪದ್ಯಗಳನ್ನು ಬರೆದು ಕೊಡುವವರೂ ಹೊಟ್ಟೆಗಿಲ್ಲದೇ ಅಲೆಯುತ್ತಾರೆ. ಕಥೆಯು ಮುಖ್ಯವಲ್ಲ. ಸೀನರೀಸ್, ಸಂಗೀತ, ನರ್ತನ, ಇದೆಲ್ಲದಕ್ಕೂ ಒಪ್ಪುವ ನಟಿಯರು ಮುಖ್ಯ. ಅದನ್ನು ಹೊಂದಿಸಿಬಿಟ್ಟರೆ, ಕಥೆಯು ತಾನಾಗಿ ಹೊಂದಿಕೊಳ್ಳುತ್ತದೆ. ಈಗಿನ ಕಾಲದಲ್ಲಿ ಜನರಿಗೇನು ಬೇಕು ? ಸಂಗೀತ ಅಭಿನಯಗಳು ಬೇಕು. ಚತುರರಾದ ನಟಿಯರಿರಬೇಕು. ಹಾಸ್ಯ ವಿನೋದಗಳು ಸಾಕಷ್ಟು ಇರಬೇಕು. ಸ್ಟುಡಿಯೋ ಒಳ್ಳೆಯದಾಗಬೇಕು. ಇದಕ್ಕೆಲ್ಲಾ ಹಣವಿರಬೇಕು. ಸ್ವಲ್ಪ ಬುದ್ಧಿವಂತಿಕೆಯೂ ಇರಬೇಕು. ಅದೆಲ್ಲಾ ನಿನಗಿದೆ " ಎಂದು ಹೇಳಿದನು.

ಭಟ್ಟನು "ವಿಜಯಾ. ನಾನು ನಿನ್ನ ಸಹಾಯದ ಮೇಲೆ ಬಹಳ ಅವಲಂಬನೆ ಮಾಡಿದ್ದೇನೆ. ನೀನು ಸಹಾಯ ಮಾಡುವುದಿಲ್ಲವೇ ?" ಎಂದನು.

ವಿಜಯನು " ನಾನು ಸಹಾಯ ಮಾಡುವುದಿಲ್ಲವೆಂದು ನಿನಗಾರು ಹೇಳಿದರು ? ಬದುಕಿರುವವರೆಗೂ ನಿನಗೆ ಸಹಾಯ ಮಾಡದೇ ನನಗೆ ಮತ್ತಾವ ಕೆಲಸವಿದೆ ?" ಎಂದು ಹೇಳಿದನು.

ಅವರಿಬ್ಬರೂ ಆ ದಿನ ಪ್ರಭುರಾಜರನ್ನು ಹೋಗಿ ನೋಡಿ ಮಾತನಾಡುವ ಆಲೋಚನೆ ಮಾಡಿದರು.

ಭಟ್ಟನು ಪ್ರಭುರಾಜರ ಮನೆಗೆ ಫೋನ್ ಮಾಡಿದನು. ಮಧ್ಯಾನ್ಹ ನಾಲ್ಕು ಘಂಟೆಯ ಮೇಲೆ ಪ್ರಭುರಾಜರ ಮನೆಯಲ್ಲಿಯೇ ಕಲೆತು ಮಾತನಾಡುವುದೆಂದು ನಿರ್ಧಾರವಾಯಿತು.

ಈ ವಿಷಯಗಳನ್ನೆಲ್ಲಾ ಭಟ್ಟನು ಲಕ್ಷ್ಮೀದೇವಿಗೂ ತಿಳಿಸಿದನು.

ಲಕ್ಷ್ಮೀದೇವಿಯು "ನೀವು ಹೊಸ ಚಿತ್ರಪಟವನ್ನು ತಯಾರಿಸುವುದಾದರೆ ಬಹಳ ಸಂತೋಷ. ಅದಕ್ಕೆ ನಾನೇನು ಮಾಡಬೇಕು ? ನಿಮ್ಮ ಚಿತ್ರಪಠದಲ್ಲಿ ನಾನು ವೇಷ ಹಾಕಿಕೊಂಡು ಅಭಿನಯಿಸಬೇಕೇನು ?" ಎಂದಳು.

ಭಟ್ಟನು "ಲಕ್ಷ್ಮೀ. ನೀನು ಹಾಸ್ಯಕ್ಕಾಗಿ ಹೇಳಿದರೂ ಅದರಲ್ಲೊಂದು ಸ್ವಾರಸ್ಯವಿದೆ. ನೀನು ಸಿನೀಮಾದಲ್ಲಿ ಅಭಿನಯ ಮಾಡಿದರೆ ಸಿನೀಮಾ ಜಗತ್ತಿನಲ್ಲಿ ಒಂದು ಅದ್ಭುತ ಕ್ರಾಂತಿಯೇ ಆಗುವುದು" ಎಂದು ಹೇಳಿದನು.

ವಿ ಜ ಯ ನು ನಕ್ಕು "ಅದರಿಂದೇನೂ ಅದ್ಭುತವಾಗುವುದಿಲ್ಲ. ಸಿನೀಮಾ ನಟಿಗಳನ್ನು ಮದುವೆಯಾಗುವ ಫ್ಯಾಷನ್ ಬಂದಿದೆ. ಮದುವೆಯಾದ ಸಂಸಾರಿಕರನ್ನು ಚಿತ್ರಪಠದಲ್ಲಿ ತಂದು ಕುಣಿಸುವ ಫ್ಯಾಷನ್ ಬಂದಂತಾಗುತ್ತದೆ. ಜನರ ದೃಷ್ಟಿಯಿಂದ ಎಲ್ಲವೂ ಸಮಾನವೇ. ಆದರೆ ಲಕ್ಷ್ಮೀದೇವಿಯವರನ್ನು ಚಿತ್ರಜಗತ್ತಿಗೆ ಕೊಂಡು ಹೋಗುವಷ್ಟು ಹುಚ್ಚನಾಗಿಲ್ಲವಷ್ಟೇ ನೀನು ?" ಎಂದು ಹೇಳಿದನು.

ಲಕ್ಷ್ಮಿಯು "ಕವಿರಾಜ, ನೀವಿಬ್ಬರೂ ಏಕೆ ವಾಗ್ವಾದ ಮಾಡುತ್ತೀರಿ ? ನಾನೇನು ಸಿನೀಮಾ ನಟಿಯಾಗಬಲ್ಲನೇ ? ನಾಟ್ಯ ಅಭಿನಯಗಳು ಒಂದು ವಿಶೇಷ ಕಲೆಯಲ್ಲವೇ ? ನಾನೆಲ್ಲಿ ? ಚಿತ್ರಪಟವೆಲ್ಲಿ ?" ಎಂದಳು.

ಭಟ್ಟನು "ನಾನು ನಿನ್ನನ್ನು ನಟಿಯಾಗಬೇಕೆಂದು ಹೇಳಲಿಲ್ಲ. ನನ್ನ ಪರಿಹಾಸ್ಯವನ್ನು ವಿಜಯನು ಬೇರೊಂದು ರೀತಿಯಾಗಿ ತಿರುಗಿದನು. ನಾನು ಮಾಡುವ ಎಲ್ಲ ಕೆಲಸಗಳಿಗೂ ನಿನ್ನ ಅನುಮತಿ ಬೇಕು. ಅದಕ್ಕಾಗಿ ನಿನಗೆ ತಿಳಿಸಿದೆ. ಅಷ್ಟೆ. ನೀನು ಚಿತ್ರಸಟದ ನಟಿಯಲ್ಲದಿದ್ದರೂ ಚಿತ್ರಪಟದ ಸ್ವಾಮಿನಿಯಾಗುವುದಿಲ್ಲವೇ ? ಅದರ ಹೊಣೆಗಾರಿಕೆಯು ಸಾಮಾನ್ಯವಾದುದೇ ?" ಎಂದನು.

ಲಕ್ಷ್ಮಿಯು "ಹೌದು, ನಿಮ್ಮ ಕಾರ್ಯಗಳಲ್ಲೆಲ್ಲಾ ನಾನೇ ಸ್ವಾಮಿನಿಯು" ಎಂದು ಹೇಳಿ, ನಕ್ಕಳು.

ಲೋಂಪಾಲಾದಲ್ಲಿ ಪ್ರಭುರಾಜರ ಮನೆ. ಭಟ್ಟನೂ ವಿಜಯನೂ ಕಾರಿನಲ್ಲಿ ಮಧ್ಯಾಹ್ನ ಹೊರಟು ಪ್ರಭುರಾಜರ ಮನೆಗೆ ಹೋದರು. ಆ

ಮನೆಯು ಸೌಭಾಗ್ಯದ ನಿಧಿಯಂತಿದ್ದಿತು. ಕೋಣೆಗಳು, ಸ್ನೇಹಿತರೊಡನೆ ಮಾತನಾಡುವ ದೊಡ್ಡ ಹಾಲು ಇವೆಲ್ಲವೂ ಏರ್ ಕಂಡೀರ್ಷ ಮಾಡಲ್ಪಟ್ಟಿದ್ದವು. ಅಲ್ಲಿ ಅಣಿ ಮಾಡಿದ್ದ ಆಸನಗಳು, ಸಣ್ಣ ಸಣ್ಣ ಮೇಜುಗಳು ಇವೆಲ್ಲವೂ ಬಹಳ ಸೊಗಸಾಗಿದ್ದವು. ಗೋಡೆಗೆ ಹಚ್ಚಿದ್ದ ಬಣ್ಣ, ಕಟ್ಟಿದ್ದ ಪಠಗಳು ಅಪರೂಪವಾದ ಶೋಭೆಯನ್ನು ಬೀರುತ್ತಿದ್ದವು. ಬಾಗಿಲಿನಲ್ಲಿಯೇ ಪ್ರಭುರಾಜನು ಬಂದು ಸ್ನೇಹಿತರಿಬ್ಬರನ್ನೂ ಎದುರುಗೊಂಡು ಮನೆಯೊಳಗೆ ಕರೆದೊಯ್ದನು. ಉಪಚಾರೋಕ್ತಿಗಳನ್ನು ಹೇಳಿ ಅವರಿಬ್ಬರನ್ನೂ ಆಸನದಲ್ಲಿ ಕುಳ್ಳಿರಿಸಿದನು.

ಗೋಡೆಯಲ್ಲಿ ಅಡಗಿದ್ದ ರೇಡಿಯೋ ಸಣ್ಣ ಧ್ವನಿಯಿಂದ ಹಾಡುತ್ತಿದ್ದಿತು. ಎಲ್ಲಿಂದಲೋ ವೀಣಾ ವಾದನವು ಕೇಳಿ ಬರುತ್ತಿದ್ದಿತು. ಸದ್ದಿಲ್ಲದೇ ಪಂಕ ಗಾಳಿಯನ್ನು ಬೀಸುತ್ತಿದ್ದಿತು. ಭಟ್ಟನೂ ವಿಜಯನೂ ಅದೊಂದು ಸ್ವಪ್ನ ಪ್ರಪಂಚದಲ್ಲಿ ಜಾಗರಿಕರಾಗಿರುವಂತೆ, ಅನುಭವ ಮಾಡುತ್ತಿದ್ದರು. ಬಾಲಕನೊಬ್ಬನು ಗಾಜಿನ ಲೋಟಾಗಳಲ್ಲಿ ಹಣ್ಣಿನ ರಸವನ್ನು ತಂದು ಕೊಟ್ಟನು. ಪ್ರಭುರಾಜನು ಮಿತ್ರರಿಗೆ ಉಪಚಾರವನ್ನು ಹೇಳಿ ಸತ್ಕರಿಸಿದನು.

ಅನಂತರ ಭಟ್ಟನು ಬಂದ ಕಾರ್ಯದ ವಿಚಾರವಾಗಿ ಪ್ರಸ್ತಾಪ ಮಾಡಿದನು.

ಪ್ರಭುರಾಜನು “ ನೀವು ಹೇಳಿದ್ದೆಲ್ಲಾ ನನಗೆ ಅರ್ಥವಾಯಿತು· ಒಂದು ಚಿತ್ರಪಟವನ್ನು ತಯಾರಿಸಬೇಕೆನ್ನುತ್ತೀರಿ. ಅದರಲ್ಲಿ ನೀವು ಸಮರ್ಥರೆಂದು ನನ್ನ ನಂಬಿಕೆ. ಅವಕ್ಕೆ ನನ್ನಿಂದೇನಾಗಬೇಕಾಗಿದೆ ? ಹೇಳರಿ ” ಎಂದು ಕೇಳಿದನು.

ಭಟ್ಟನು “ ನಾನು ಈ ಊರಿನಲ್ಲಿರುವುದೇ ನಿಮ್ಮಿಂದ. ಮನೆಯನ್ನು ಮಾಡಿಕೊಟ್ಟವರು ನೀವು. ಇಲ್ಲಿ ಜೊತೆಯಲ್ಲಿ ಸೇರಿ ವ್ಯಾಪಾರ ಮಾಡೋಣವೆಂದು ಹೇಳಿದಿರಿ. ಅದಕ್ಕಾಗಿ ನಿಮ್ಮಲ್ಲಿ ಬಂದಿದ್ದೇವೆ ” ಎಂದು ಹೇಳಿದನು.

ಪ್ರಭುರಾಜನು “ ವ್ಯಾಪಾರವೇ ? ನನ್ನ ವ್ಯಾಪಾರದ ರೀತಿಯನ್ನು ಹೇಳುತ್ತೇನೆ, ಕೇಳಿರಿ. ಸ್ಟುಡಿಯೋ ನಮ್ಮ ಸ್ವಂತದ್ದಿರಬೇಕು. ಸ್ವಂತ ಸ್ಟುಡಿಯೋ ಮಾಡುವುದೆಂದರೆ ಈಗಿರುವ ಸ್ಟುಡಿಯೋಗಳಿಗಿಂತ ಹೊಸ

ಹೊಸ ಯಂತ್ರಸಾಮುಗ್ರಿಗಳಿರಬೇಕು. ನಂಬಿಕೆಯುಳ್ಳ ನಟ ನಟಿಯರಿರ ಬೇಕು. ಜನರ ಮನಸ್ಸನ್ನು ಕಲೆಯಿಂದ ಸಂತೋಷ ಪಡಿಸುವ ಚಿತ್ರಪಠ ಗಳನ್ನು ತಯಾರಿಸುವಂತಿರಬೇಕು. ವರ್ಷಕ್ಕೆ ಎರಡು–ಮೂರು ಚಿತ್ರ ಗಳನ್ನು ಮಾತ್ರ ನಾವು ತಯಾರಿಸಬೇಕು. ಇದು ನನ್ನ ಆಶಾ ಕಲ್ಪನೆ. ಎಂದಿಗೆ ಸಿದ್ಧಿಸುವುದೋ ಹೇಳಲಾಗುವುದಿಲ್ಲ. ಯಾರದೋ ಸ್ಟುಡಿಯೋ, ಯಾರೋ ನಟ ನಟಿಯರು, ಯಾವುದೋ ಕಥೆಗಳು. ಇಂತಹ ಚಿತ್ರಪಠ ತಯಾರಿಕೆಯಲ್ಲಿ ನನಗೆ ಅಭಿನಿವೇಶವಿಲ್ಲ. ಆದರೂ ವ್ಯಾ ಪಾ ರ ದ ಮರ್ಮವೊಂದಿದೆ. ಇಷ್ಟಾರ್ಥಗಳೆಲ್ಲವೂ ಸಂಪೂರ್ಣವಾಗಿ ಸಿ ದ್ಧ ವಾ ದ ಮೇಲೆ ಇ ಂ ತ ಹ ಕೆಲಸಗಳನ್ನು ಆರಂಭಿಸುತ್ತೇನೆಂಬು ಹೇಳುವುದು ವ್ಯಾಪಾರದ ಲಕ್ಷಣವಲ್ಲ. ನೀವು ಆರಂಭ ಮಾಡಿರಿ. ನಾನು ಅರ್ಧ ಹಣ ವನ್ನು ಕೊಡುತ್ತೇನೆ. ಪೂರ್ಣ ಅಧಿಕಾರವು ನಿಮ್ಮದು. ಲಾಭದಲ್ಲಿ ನನಗೆ ಭಾಗವನ್ನು ಕೊಡಿ. ನಿಮ್ಮಲ್ಲಿ ಸಂಪೂರ್ಣ ನಂಬಿಕೆಯು ನನಗಿದೆ" ಎಂದು ಹೇಳಿದನು.

ವಿಜಯನು "ಪ್ರಭುರಾಜರೇ, ನಿಮ್ಮ ಅಭಿಪ್ರಾಯಗಳು ಸ್ಪಷ್ಟವಾಗಿವೆ. ಮಾತು ಖಡಾಖಂಡಿತವಾಗಿವೆ. ನಾವು ಅಷ್ಟೇ ಸ್ಪಷ್ಟವಾಗಿ ಹೇಳುತ್ತೆವೆ. ನಮ್ಮ ಚಿತ್ರಕ್ಕೆ ಹತ್ತು ಲಕ್ಷರೂಪಾಯಿಗಳನ್ನು ಅಂದಾಜು ಮಾಡಿದ್ದೇವೆ. ಅದು ಹಿಂದೀ ಚಿತ್ರ. ಅದಕ್ಕೆ ಪೂರಾ ಬಂಡವಾಳವನ್ನು ಹಾಕಲು ಭಟ್ಟ ರಲ್ಲಿ ಹಣವಿದೆ. ನೀವೂ ಬಲ್ಲಿರಿ. ನಿಮ್ಮೊಡನೆ ಸೇರಿ ಈ ಕಾರ್ಯವನ್ನು ಮಾಡಲು ಕೇಳುವುದಕ್ಕೆ ಬಂದಿದ್ದೇವೆ. ಈ ಕಾರ್ಯದಲ್ಲಿ ನಿಮ್ಮ ಆಸ ಕ್ತಿಯು ಬೇಕು. ಸಲಹೆ ಸಹಾಯಗಳು ಬೇಕು. ಅದನ್ನು ಹೇಳಿರಿ" ಎಂದು ಹೇಳಿದನು.

ಪ್ರಭುರಾಜನು ಸ್ವಲ್ಪ ಹೊತ್ತು ಆಲೋಚನೆ ಮಾಡಿದನು. "ಕವಿ ರಾಜ. ನಿಮ್ಮ ಮಾತು ಅರ್ಥವಾಗುತ್ತದೆ, ಆದರೂ ಮತ್ತೊಮ್ಮೆ ಹೇಳಿರಿ. ನಾನೇನು ಮಾಡಬೇಕು ?" ಎಂದನು.

ವಿಜಯನು "ನೀವೂ ಭಟ್ಟನೂ ಇಬ್ಬರೂ ಸೇರಿ ಈ ಕಾರ್ಯವನ್ನು ನಡೆಸಬೇಕು. ನಿಮ್ಮದೇ ಚಿತ್ರವೆಂದು ಅವರು ಭಾವಿಸಬೇಕು. ಅವರದೇ ಚಿತ್ರವೆಂದು ನೀವು ಭಾವಿಸಬೇಕು. ನಿಮ್ಮಿಬ್ಬರ ಬುದ್ಧಿಶಕ್ತಿ, ಕ್ರಿಯಾಶಕ್ತಿ

ಗಳು ಅದರಲ್ಲಿ ಎದ್ದು ಕಾಣುತ್ತಿರಬೇಕು. ಈಗ ಅರ್ಥವಾಯಿತೇ? ನಾವು ನಿಮ್ಮಲ್ಲಿಗೆ ಏಕೆ ಬಂದಿದ್ದೇವೆಂಬುದು ?" ಎಂದು ಹೇಳಿದನು.

ಪ್ರಭುರಾಜನು "ಒಂದು ದಿನದ ಮಟ್ಟಿಗೆ ನನಗೆ ಅವಕಾಶವನ್ನು ಕೊಡಿ. ನಾನು ಸರಿಯಾಗಿ ಯೋಚನೆ ಮಾಡಿ ಹೇಳುತ್ತೇನೆ. ಇದರಿಂದ ಹೆಜ್ಜೆಯನ್ನು ಹಿಂದಕ್ಕಿಟ್ಟಿದ್ದೇನೆಂದು ಭಾವಿಸಬೇಡಿರಿ. ನಾನು ನಿಮ್ಮೊಡನೆಯೇ ಇದ್ದೇನೆಂದು ಕೊಳ್ಳಿರಿ" ಎಂದು ಹೇಳಿದನು.

ಭಟ್ಟನೂ ವಿಜಯನೂ ಒಪ್ಪಿಕೊಂಡರು. ತಾವು ಬಂದ ಕಾರ್ಯವು ಸಫಲವಾದಂತೆಯೇ ಭಾವಿಸಿದರು. ಪ್ರಭುರಾಜನು ಇಬ್ಬರು ಸ್ನೇಹಿತರನ್ನೂ ಮಹಡಿಯ ಮೇಲಕ್ಕೆ ಕರೆದೊಯ್ದನು. ಮಹಡಿಯ ಮೇಲಿನ ಹೊರಗಿನ ವರಾಂಡವು ಲತಾಗೃಹದಂತೆ ಮಾಡಲ್ಪಟ್ಟಿದ್ದಿತು. ಅಲ್ಲಿ ಮೇಜದ ಮೇಲೆ ಮಿಠಾಯಿಗಳೂ ಹಣ್ಣುಗಳೂ ಗಾಜಿನ ತಟ್ಟೆಗಳಲ್ಲಿ ಇಡಲ್ಪಟ್ಟಿದ್ದವು. ಪ್ರಭುರಾಜನು ಇಬ್ಬರು ಅತಿಥಿಗಳನ್ನೂ ಚಹಾ ತೆಗೆದುಕೊಳ್ಳಬೇಕೆಂದು ಪ್ರಾರ್ಥಿಸಿ ಅವರಿಬ್ಬರನ್ನೂ ಆ ಲತಾಗೃಹದಲ್ಲಿ ಕೂಡಿಸಿದನು. ಮರುಕ್ಷಣದಲ್ಲಿಯೇ ಪ್ರಭುರಾಜನ ಪತ್ನಿಯು ಅಲ್ಲಿಗೆ ಬಂದಳು. ಪ್ರಭುರಾಜನು "ರೇವಾ. ಇವರೇ ಮದ್ರಾಸಿನ ನಮ್ಮ ಸ್ನೇಹಿತರು. ನಮ್ಮ ವರ್ಲಿಯ ಮನೆಯನ್ನು ಇವರಿಗೇ ನಾನು ಕೊಟ್ಟಿದ್ದು. ಇವರೂ ನಾವೂ ಒಂದು ವರ್ಷದಿಂದ ವ್ಯಾಪಾರದಲ್ಲಿ ಬೆರತಿದ್ದೇವೆ. ಬಹಳ ಪ್ರಮಾಣಿಕರು· ದೊಡ್ಡ ಮನುಷ್ಯರು" ಎಂದು ಹೇಳಿದನು.

ರೇವಾ ಮಂದಹಾಸವನ್ನು ಬೀರುತ್ತಾ ಕೈಮುಗಿದಳು.

ಪ್ರಭುರಾಜನು ವಿಜಯನನ್ನು ತೋರಿಸಿ "ಇವರು ಕವಿಗಳು, ಗ್ರಂಥಕರ್ತರು, ಕಲಾವಿದರು. ನಮ್ಮ ಭಟ್ಟರಿಗೆ ಆಪ್ತ ಸ್ನೇಹಿತರು. ಇವರ ಹೆಸರು ವಿಜಯೇಂದ್ರರಾವ್" ಎಂದನು.

ರೇವಾ ಕಣ್ಣು ಅರಳಿಸಿ, ತಲೆ ಬಾಗಿಸಿ ಕವಿಯನ್ನು ವಂದಿಸಿದಳು.

ಈ ಅತಿಥಿಗಳ ಜೊತೆಯಲ್ಲಿ ರೇವಾದೇವಿಯು ಕುಳಿತುಕೊಂಡಳು. ನಾಲ್ವರೂ ಮಾತನಾಡುತ್ತಾ ಟೀ ತೆಗೆದುಕೊಂಡರು.

ಮೊದಮೊದಲು ರೇವಾದೇವಿಯು ಒಂದೊಂದು ಮಾತನಾಡುತ್ತಿ

ದ್ದಳು. ಭಟ್ಟನು ರೇವಾದೇವಿಯು ಹೆಚ್ಚು ಮಾತನಾಡುವವಳಲ್ಲ, ಒಂದೊಂದು ಮಾತನಾಡುತ್ತಾಳೆ—ಎಂದುಕೊಂಡನು. ಕೊನೆಕೊನೆಯಲ್ಲಿ ರೇವಾ ಧಾರಾಕಾರವಾಗಿ ಮಾತನಾಡ ತೊಡಗಿದಳು.

ಅವಳ ಮಾತಿನಲ್ಲಿ ಮಾಧುರ್ಯವು ತುಂಬಿದ್ದಿತು. ವೀಣೆಯ ಧ್ವನಿಗೆ ಅಮೃತವನ್ನು ತುಂಬಿದಂತೆ ಕಿವಿಗೆ ಕೇಳುತ್ತಿದ್ದಿತು. ಆ ರೇವಾಳ ಕಣ್ಣುಗಳು ಉಜ್ವಲ ಕಾಂತಿಯನ್ನು ಬೀರುತ್ತಿದ್ದವು. ಆ ಕಂಠಸ್ಥಳ, ಆ ಭುಜಗಳು, ಆ ಬಿಚ್ಚಿದ ಕೇಶರಾಶಿ, ಆ ಕಪೋಲಗಳು, ಆ ಕಪೋಲಗಳ ಮೇಲೆ ಕಿವಿಯಿಂದ ಜೋಲುತ್ತಿರುವ ನೀಲಮಣಿ. ಭಟ್ಟನು ಮನಸ್ಸಿನಲ್ಲಿ “ ಇದೇನು ? ನಾನು ಎಂದಾದರೂ ಇಂತಹ ನಾರೀಮಣಿಯನ್ನು ನೋಡಿದ್ದೇನೆಯೇ ? ಇಂತಹ ಮಧುರ ಭಾಷಣವನ್ನು ನನ್ನ ಕಿವಿಗಳು ಕೇಳಿವೆಯೋ ” ಎಂದು ಕ್ಷಣ ಹೊತ್ತು ವಿಭ್ರಾಂತನಾದನು. ಒಂದು ಬಾರಿ ಲಕ್ಷ್ಮೀದೇವಿಯ ಮುಖವು ಜ್ಞಾಪಕಕ್ಕೆ ಬಂದಿತು. ಮತ್ತೊಂದು ಬಾರಿ ವಿಮಲೆಯ ಮುಖವು ನೆನಪಿಗೆ ಬಂದಿತು. ಮರುಕ್ಷಣದಲ್ಲಿಯೇ ರೇವಾದೇವಿಯ ಸೌಂದರ್ಯವು ಲಕ್ಷ್ಮಿ ವಿಮಲೆಯರ ಬಿಂಬವನ್ನು ಭಟ್ಟನ ಹೃದಯದಿಂದ ಅಳಿಸಿಬಿಟ್ಟು ತಾನೇತಾನಾಗಿ ವಿಜೃಂಭಿಸುತ್ತಿದ್ದಿತು. ಭಟ್ಟನು ರೇವಾದೇವಿಯೊಡನೆ ವಿನಯದಿಂದ ಮಾತನಾಡುತ್ತಿದ್ದನು. ಏನು ಮಾತನಾಡಿದನೋ ಅವನಿಗೆ ಗೊತ್ತಿಲ್ಲ ಆ ಮಾತುಗಳ ಅರ್ಥವು ಮನಸ್ಸಿನಲ್ಲಿ ನಿಲ್ಲಲಿಲ್ಲ.

ಹೊರಟು ಬರುವಾಗ ರೇವಾದೇವಿಯೂ ಪ್ರಭುರಾಜನೂ ಭಟ್ಟನನ್ನೂ ವಿಜಯನನ್ನೂ ಕಳುಹಿಸಿ ಕೊಡಲು ಕಾರಿನವರೆಗೆ ಬಂದರು. ಭಟ್ಟನು ಅವರಿಬ್ಬರನ್ನೂ ತಮ್ಮ ಮನೆಗೆ ಒಂದು ದಿನ ಬರಬೇಕೆಂದು ಆಹ್ವಾನವಿತ್ತನು.

ರೇವಾದೇವಿಯು “ ಅದಕ್ಕೇನು, ಆಗಬಹುದು. ಎಂದಾದರೂ ಬರುತ್ತೇನೆ ” ಎಂದು ಹೇಳಿದಳು.

ಭಟ್ಟನೂ ವಿಜಯನೂ ಕಾರಿನಲ್ಲಿ ಕುಳಿತುಕೊಂಡರು.

ಭಟ್ಟನು ರೇವಾದೇವಿಯನ್ನು ಸ್ಮರಿಸಿಕೊಳ್ಳುತ್ತಾ “ ವಿಜಯ. ಅವರ ಮನೆ ನೋಡಿದೆಯಾ ? ಎಷ್ಟು ಚೆನ್ನಾಗಿದೆ. ನಾವು ನಮ್ಮ ಮನೆಯು ಎಷ್ಟೋ ಚೆನ್ನಾಗಿದೆಯೆಂದು ಹೆಮ್ಮೆ ಪಟ್ಟುಕೊಳ್ಳುತ್ತೇವೆ. ಈ ಮನೆ

ಯನ್ನು ನೋಡಿದರೆ ಇದರ ಮುಂದೆ ನಮ್ಮ ಮನೆಯನ್ನು ನಿವಾಳಿಸುವಂತಿದೆ" ಎಂದನು.

ವಿಜಯನು "ಹೌದು, ಇವರ ಮನೆ ಬಹಳ ಚೆನ್ನಾಗಿದೆ. ತುಂಬಾ ದುಡ್ಡಿದ್ದರೆ ಅಂತಹ ಮನೆಯನ್ನು ಮಾಡುವುದೇನೂ ಕಷ್ಟವಲ್ಲ" ಎಂದನು.

ಭಟ್ಟನು "ಅಲ್ಲವಯ್ಯಾ! ಆ ದಂಪತಿಗಳ ಅಲಂಕಾರ ಪ್ರಿಯತೆಯು ಎಷ್ಟಿದೆ ಎಂಬುದನ್ನು ಮೆಚ್ಚಬೇಡವೇ?" ಎಂದನು.

ವಿಜಯನು "ಅಹುದು. ಮೆಚ್ಚತಕ್ಕದ್ದೇ. ನಾನೂ ಮೆಚ್ಚಿದೆ. ಆದರೆ ನಿನ್ನ ಮನೆಯು ಮಾತ್ರ ನನಗೆ ಇದಕ್ಕಿಂತಲೂ ಪ್ರಿಯವಾಗಿದೆ" ಎಂದನು.

ಭಟ್ಟನು "ಅದು ನಿನ್ನ ಮನೋಧರ್ಮ. ನಿನ್ನ ಮನಸ್ಸಿನಲ್ಲಿ ನಮ್ಮ ಮೇಲಿರುವ ಪ್ರೀತಿ" ಎಂದನು.

ಕಾರು ವೇಗವಾಗಿ ಹೋಗುತ್ತಿದ್ದಿತು.

ಭಟ್ಟನು "ವಿಜಯ. ಆ ರೇವಾದೇವಿಯ ಸೌಂದರ್ಯವನ್ನು ನೋಡಿದೆಯಾ? ಅವಳೆಷ್ಟು ಸುಂದರಳಾದ ಹೆಂಗಸು. ಎಂತಹ ಮೈ ಬಣ್ಣ. ಆ ಕಣ್ಣುಗಳಲ್ಲಿ ಎಂತಹ ಕಾಂತಿ! ಅಷ್ಟು ನುಣುಪಾದ, ಕಪ್ಪಾದ ಕೇಶ ದಾಮವನ್ನು ಎಲ್ಲಿಯಾದರೂ ಕಂಡಿದ್ದೀಯಾ? ಆ ಎಳೆಗೆಂಪಿನ ಸೀರೆಯು ಅವಳಿಗೆಷ್ಟು ಒಪ್ಪುತ್ತಿತ್ತು? ಆ ಕರಿಯ ಕುಪ್ಪಸವು ಹೇಗೆ ಬಿಗಿದಿತ್ತು? ಆ ಕಂಠದಲ್ಲಿ ಬಳಕುತ್ತಿದ್ದ ಮುತ್ತಿನ ಹಾರವು ಎಷ್ಟು ಮನೋಹರವಾಗಿತ್ತು? ಆ ಕಿವಿಗಳಿಂದ ಕಪೋಲದ ಮೇಲೆ ಅಲುಗುತ್ತಿದ್ದ ನೀಲದ ಕಲ್ಲು ಆ ಕಪೋಲ ಗಳಿಗೆ ಎಂತಹ ಕಾಂತಿಯನ್ನು ಕೊಡುತ್ತಿದ್ದಿತು? ಆ ತೆಳುವಾದ ಕೆಂದುಟಿ ಗಳು ದಂತ ಪಂಗ್ತಿಯೊಡನೆ ಸೇರಿ ಹೇಗೆ ಮಂದಹಾಸನ್ನು ಬೀರುತ್ತಿದ್ದುವು. ನೋಡಿದೆಯಾ? ಹೆಂಗಸಿದ್ದರೆ ಅಂತಹವಳಿರಬೇಕು. ಈ ಜಗತ್ತಿನ ಸುಖ ಸೌಭಾಗ್ಯಗಳೆಲ್ಲವೂ ಅಂತಹವಳಿಗಿರಬೇಕು" ಎಂದನು.

ವಿಜಯನಿಗೆ ಚಾವಟಿಯಿಂದ ಹೊಡೆದಂತಾಯಿತು.

ಭಟ್ಟನ ಸೌಂದರ್ಯ ಪಿಪಾಸೆಯು ಎಷ್ಟು ತೀಕ್ಷ್ಣವಾಗಿದೆ? ಕಾಮ ವಾಸನೆಯು ಎಷ್ಟು ಉತ್ಕಟವಾಗಿದೆ—ಎಂದುಕೊಂಡನು.

"ಹೌದು, ಭಟ್ಟ! ಆ ಗೃಹಿಣಿಯು ಸೌಂದರ್ಯವತಿಯೆಂಬುದರಲ್ಲಿ ಸಂದೇಹವೇ ಇಲ್ಲ. ಆದರೆ ಹೊಸ ನೋಟದಿಂದ ನೀನು ಕೊಂಚ ಮುಗ್ಧ

ನಾಗಿರುವೆ. ವಿಹ್ವಲನಾಗಿರುವೆ. ಆ ವಿಹ್ವಲತೆಯಲ್ಲಿ ನಿನಗೆ ಎಲ್ಲವೂ ಮಿಂಚಿನಂತೆ ಕಾಣುತ್ತವೆ. ಹೇಗೇ ಆಗಲಿ, ರೇವಾ ಗೃಹಣಿ. ನಮ್ಮ ಸ್ನೇಹಿತನ ಪತ್ನಿ " ಎಂದು ಹೇಳಿ ಮಾತನ್ನು ನಿಲ್ಲಿಸಿದನು.

ಕಾರು ಮನೆಗೆ ತಲುಪಿತು. ಭಟ್ಟನು ಬೇಗ ಬೇಗ ಹೋಗಿ ಮಹಡಿಯ ಮೇಲೆ ಕಸೂತಿ ಹಾಕುತ್ತ ಕುಳಿತಿದ್ದ ಲಕ್ಷ್ಮಿದೇವಿಯನ್ನು ನೋಡಿದನು.

ಭಟ್ಟನು ಅವಳ ಬೆನ್ನು ತಟ್ಟುತ್ತಾ " ಲಕ್ಷ್ಮಿ, ನಾನು ಪ್ರಭುರಾಜನ ಮನೆಗೆ ಹೋಗಿದ್ದೆ. ಅವನೊಡನೆ ನಮ್ಮ ಹೊಸ ಚಿತ್ರಪಟದ ಮಾತನ್ನು ಮುಗಿಸಿಕೊಂಡು ಬಂದಿದ್ದೇನೆ. ಆತ ಒಪ್ಪಿಕೊಂಡಿದ್ದಾರೆ " ಎಂದು ಹೇಳಿದನು.

ಲಕ್ಷ್ಮಿಯು " ಸರಿ. ಈಗ ಸರಿಯಾದಂತಾಯಿತು. ನಿಮಗೆ ಒಬ್ಬ ಪುಣ್ಯವಂತರ ಜೊತೆಯು ದೊರೆತಂತಾಯಿತು " ಎಂದಳು.

ಭಟ್ಟನು " ಲಕ್ಷ್ಮಿ. ನಿನಗೂ ಒಂದು ಒಳ್ಳೆಯ ಜೊತೆಯನ್ನು ಮಾಡಿಕೊಂಡು ಬಂದಿದ್ದೇನೆ. ನೋಡು. ಪ್ರಭುರಾಜನ ಪತ್ನಿ ರೇವಾದೇವಿಯನ್ನು ನಮ್ಮ ಮನೆಗೆ ಕರೆದು ಬಂದಿದ್ದೇನೆ. ಇನ್ನೊಂದು ದಿನ ಇಲ್ಲಿಗೆ ಕರೆತರುತ್ತೇನೆ. ಆ ರೇವಾ ಎಂತಹ ಸೌಂದರ್ಯವತಿ, ಎಷ್ಟು ಕಲಾವತಿ. ಅವಳಿಂ ನಕ್ಕರೆ ಕೋಣೆಯು ಬೆಳಕಾಗುತ್ತದೆ. ಕಣ್ಣು ತೆರೆದರೆ ಆ ಕಾಂತಿಯು ಜಗತ್ತಿನ ಮೇಲೆ ಸಮ್ಮೋಹನಾಸ್ತ್ರವನ್ನು ಬೀರುತ್ತದೆ " ಎಂದನು.

ಲಕ್ಷ್ಮಿಯು " ಸಾಕು ಸಾಕು. ಈ ಹೆಣ್ಣು ಜಾತಿಯ ವರ್ಣನೆಯನ್ನು ಎಲ್ಲಿ ಕಲಿತಿರಿ ? ಹೆಂಗಸರ ಮುಂದೆ ಹೆಂಗಸರನ್ನು ವರ್ಣಿಸಲು ನಿಮಗೆ ನಾಚಿಕೆಯಾಗುವುದಿಲ್ಲವೇ ?" ಎಂದು ನಕ್ಕಳು.

" ಇದೇನು ಲಕ್ಷ್ಮಿ ಹೀಗೆ ಹೇಳುವೆ. ನನಗೆ ನಾಚಿಕೆಯಿಲ್ಲವೆ? ಮತ್ತಾರ ಮುಂದಾದರೂ ಹೀಗೆ ಮಾತನಾಡುವುದನ್ನು ನೋಡಿದ್ದೀಯಾ ? ಕಲ್ಯಾಣಿಯ ಮುಂದೆ ಎಂದಾದರೂ ಬಾಯಿ ತಪ್ಪಿ ನುಡಿದಿದ್ದೇನೆಯೇ ? ನಿನ್ನ ಸೌಂದರ್ಯ, ಗಾಂಭೀರ್ಯಗಳನ್ನಾದರೂ ಕಲ್ಯಾಣಿಯ ಮುಂದೆ ಬಣ್ಣಿಸಿದ್ದೇನೆಯೇ ? ನಿನ್ನೊಡನೆ ಮನಸ್ಸಿನಲ್ಲಿ ಬಂದುದೆಲ್ಲವನ್ನೂ ಬಿಚ್ಚಿ ಹೇಳುವುದೊಂದು ಆನಂದ. ಅದಕ್ಕೆ ನಾನೇಕೆ ನಾಚಬೇಕು ?" ಎಂದನು.

ಲಕ್ಷ್ಮಿಯು ನಗುತ್ತಾ “ ನಿಮಗೆ ನಾಚಿಕೆ ಇಲ್ಲದಿದ್ದರೆ ನನಗಾದರೂ ನಾಚಿಕೆಯಾಗಬೇಡವೇ ? ನಾನು ಹೆಣ್ಣಲ್ಲವೇ ?” ಎಂದಳು.

ಭಟ್ಟನು “ ನಿಜ ! ಲಕ್ಷ್ಮಿ, ನಿನಗೆ ನಾಚಿಕೆಯಾದರೆ ಅದೂ ಒಂದು ಆನಂದ. ಆ ನಾಚಿದ ಮುಖವು ಎಷ್ಟೋ ಮನೋಹರವಾಗಿರುತ್ತದೆ ” ಎಂದು ಹೇಳಿ, ಲಕ್ಷ್ಮಿಯನ್ನು ಆಲಿಂಗಿಸಿ ಚುಂಬಿಸಿದನು.

ರಾತ್ರಿ ಭೋಜನೋತ್ತರ ಭಟ್ಟನೂ, ವಿಜಯನೂ ಕುಳಿತು ಹೊಸ ಚಿತ್ರಪಟದ ವಿಷಯವಾಗಿ ಮಾತನಾಡ ತೊಡಗಿದರು. ಭಟ್ಟನು “ ಕವಿರಾಜ ! ನಿನ್ನ ಶಿವ ಪಾರ್ವತಿಯು ಪೂರೈಸಿದೆಯೇನು ?” ಎಂದು ಕೇಳಿದನು.

ವಿಜಯನು “ ಒಂದು ರೀತಿಯಾಗಿ ಪೂರೈಸಿದೆ ಎನ್ನಬಹುದು. ಮತ್ತೊಂದು ರೀತಿಯಾಗಿ ಅದು ಯಾವಾಗಲೂ ಅಪೂರ್ಣವೇ ? ನಟ ನಟಿಯರಿಗೆ ಕಲಿಸುವಾಗ, ಕಲಿತಿದ್ದನ್ನು ಮಾತನಾಡಿಸುವಾಗ, ಅಭಿನಯಿಸುವಾಗ ಪ್ರತಿಯೊಂದು ಸಮಯದಲ್ಲಿಯೂ ತಿದ್ದುತ್ತಲೇ ಇರಬೇಕು. ಚಿತ್ರಪಟದ ನಿರ್ಮಾಣವು ಆರಂಭವಾಯಿತೆಂದರೆ ಅದೇ ಚಿತ್ರವನ್ನು ತಪಸ್ಸು ಮಾಡಿ ಪಾಕಕ್ಕೆ ಇಳಿಸಬೇಕು. ಆದ್ದರಿಂದ ಚಿತ್ರವು ಪೂರೈಸುವವರೆಗೆ ನನ್ನ ಕಥಾ ಲೇಖನವು ಅಪೂರ್ಣವಾಗಿಯೇ ಇರುತ್ತದೆ ” ಎಂದು ಹೇಳಿದನು.

ಭಟ್ಟನು “ ವಿಮಲಾದೇವಿಯು ಪಾರ್ವತಿಯ ಪಾತ್ರಕ್ಕೆ ತಕ್ಕವಳೆಂದು ನಿನ್ನ ನಿರ್ಧಾರವೋ ?” ಎಂದನು

“ ಹೌದು, ಅದೇ ನನ್ನ ನಿರ್ಧಾರ. ಚಿತ್ರಪಟದ ಮೇಲೆ ಇದುವರೆಗೆ ಬರದೇ ಇರುವ ನಟಿಯನ್ನು ತರಬೇಕು. ಅದರಿಂದ ಭಾವ ಪೂರ್ಣತೆಯು ಬರುತ್ತದೆ. ಗಾಂಭೀರ್ಯವು ತೋರುತ್ತದೆ ”

“ ಒಳ್ಳೆಯದು. ವಿಜಯ, ನೀನು ಚಾಣಾಕ್ಷನೆಂಬುದನ್ನು ನಾನು ಒಪ್ಪುತ್ತೇನೆ. ಆದರೆ ನಾವು ನಟನಟಿಯರನ್ನು ಆರಿಸುವಾಗ ಬಹಳ ಪರೀಕ್ಷಿಸಬೇಕು. ಇನ್ನೂ ಪ್ರಸಿದ್ಧರಾದ ನಟಿಯರಿದ್ದಾರೆ. ಭಾವ ಪ್ರದರ್ಶನದಲ್ಲಿ ಪ್ರವೀಣೆಯರಿದ್ದಾರೆ. ಅವರನ್ನು ನೋಡಬಾರದೇಕೆ ?” ಎಂದನು.

ವಿಜಯನು ನಗುತ್ತಾ “ ಬೆಣ್ಣೆಯನ್ನಿಟ್ಟುಕೊಂಡು ಅಂಗಡಿಯಲ್ಲಿ ತುಪ್ಪವನ್ನು ಹುಡುಕುತ್ತಾ ಹೋಗುವಂತಿದೆ, ನಿನ್ನ ಮಾತು. ವಿಮಲೆಯು ಒಂದು ವಜ್ರದಂತೆ. ಅದನ್ನು ಸಾಣೆಗೆ ಕೊಟ್ಟು ಚಿತ್ರದ ಮೇಲೆ ತರಬೇಕು. ಅದರ ಸ್ವರೂಪವನ್ನು ನೀನೂ ಅರಿಯೆ. ಅವಳೂ ಅರಿಯಳು. ವಿಮಲೆಯು ಆ ಅಜ್ಞಾನವೂ ಒಂದು ಅಪೂರ್ವ ಮುಗ್ಧತೆಯನ್ನು ಬೀರುತ್ತದೆ. ಅದೇ ನನ್ನ ಪಟಕ್ಕೆ ಮೊದಲನೆಯ ಬೆಳಕು ” ಎಂದು ಹೇಳಿದನು.

ಭಟ್ಟನು ಕ್ಷಣ ಹೊತ್ತು ಮೌನವಾಗಿದ್ದನು. ಆ ವಿಮಲೆಯ ಬಿಂಬವು ಅವನ ಮುಂದೆ ಬಂದು ನಿಂತಿತು. ನಿಜವಾದ ಪಾರ್ವತಿಯಂತೆಯೇ ಬೋಧೆ ಯಾಯಿತು.

ಭಟ್ಟನು “ಕವಿರಾಜ. ಶಿವನ ಪಾತ್ರವನ್ನು ಅಭಿನಯಿಸಲು ಯಾರನ್ನು ಸಿದ್ಧ ಮಾಡುವೆ ?” ಎಂದು ಕೇಳಿದನು.

ವಿಜಯನು “ ಅದಕ್ಕಾಗಿ ದಕ್ಷಿಣ ದೇಶವನ್ನೆಲ್ಲಾ ಹುಡುಕಿದ್ದೇನೆ. ಉತ್ತರವನ್ನು ನೋಡಿದ್ದೇನೆ. ಬಂಗಾಳದಲ್ಲಿಯೂ ಸುತ್ತಿ ನೋಡಿದ್ದೇನೆ. ಈ ಬೊಂಬಾಯಿನಲ್ಲಂತೂ ಇಲ್ಲವೇ ಇಲ್ಲ ” ಎಂದು ಸುಮ್ಮನಾದನು.

ಭಟ್ಟನು “ ಹಾಗಾದರೆ ಮುಂದೇನು ಮಾಡುವುದು ? ಎಂದು ಕೇಳಿದನು.

ವಿಜಯನು “ ಅದಕ್ಕೂ ಒಂದು ಮಾರ್ಗವನ್ನು ನಿಶ್ಚಯಿಸಿದ್ದೇನೆ. ಕುಂದಾಪುರದ ಕಡೆ ಒಬ್ಬ ತರುಣನಿದ್ದಾನೆ. ಅವನ ಹೆಸರು ಗಣಪತಿ. ಅವನ ಆಕಾರ, ಮುಖಭಾವ, ಕೈಕಾಲುಗಳು, ಕಣ್ಣು ಮೂಗುಗಳು ಎಲ್ಲವೂ ಶಿವನ ಪಾತ್ರಕ್ಕೆ ಅಣಿಯಾಗಿವೆ. ಕಂಠವೂ ಚೆನ್ನಾಗಿದೆ. ಆದರೆ ಅವನು ಆ ಸೀಮೆಯ ದಶಾವತಾರ ಆಟದಲ್ಲಿ ಸೇರಿಹೋಗಿದ್ದಾನೆ. ಆ ಯಕ್ಷಗಾನ ವನ್ನು ಕಲಿತುಬಿಟ್ಟಿದ್ದಾನೆ. ಅದೆಲ್ಲಾ ಪ್ರಾಕೃತ. ನಮ್ಮ ನವೀನ ಜಗತ್ತಿನ ಚಿತ್ರಕ್ಕೆ ಹೊಂದಿಸುವುದು ವಿಶ್ವ ಪ್ರಯತ್ನ. ಆದರೂ ಅವನನ್ನೇ ಸಾಧಿಸ ಬೇಕೆಂದಿದ್ದೇನೆ ” ಎಂದನು.

ಭಟ್ಟನು “ ವಿಜಯ. ಏನಾದರೇನು, ಹುಟ್ಟುಗುಣ ಹೋದೀತೆ ? ನೀನು ಕವಿಯಾದರೂ ದೇಶಗಳನ್ನು ಸಂಚಾರ ಮಾಡಿದ್ದರೂ ಆ ದಕ್ಷಿಣ ಕನ್ನಡದ ಅಭಿಮಾನವು ಹೋಗಿಲ್ಲ ” ಎಂದು ಹಾಸ್ಯ ಮಾಡಿದನು.

" ಭಟ್ಟ, ನಿನಗೆ ಕಲೆಯ ಅನುಭವವೇ ಇಲ್ಲ. ಹೆಂಗಸರನ್ನು ನೋಡಿ ರೂಪವತಿಯರನ್ನೆಲ್ಲಾ ರತಿಯರೆಂದುಕೊಂಡ ಮಾತ್ರಕ್ಕೆ ಕಲಾಭಿಜ್ಞನಾಗುವುದಿಲ್ಲ. ನೋಡು, ಆ ಗಣಪತಿಯು ಕಿರಾತಾರ್ಜುನೀಯದಲ್ಲಿ ಕಿರಾತನ ವೇಷಧಾರಣೆ ಮಾಡಿಕೊಂಡು ಅಭಿನಯಿಸುತ್ತಾನೆ. ಅಂತಹ ಮನೋಮೋಹಕ ವಿಶ್ವರೂಪವನ್ನು ನಾನು ಕಂಡಿಲ್ಲ. ನಾಲ್ಕಾರು ಕೋಣಗಳಿಂದ ಅವನ ಫೋಟೋವನ್ನು ತೆಗೆಸಿಟ್ಟಿದ್ದೆ. ಎಲ್ಲಿಯೋ ಕಳೆದು ಬಿಟ್ಟಿದ್ದೇನೆ ಅವನನ್ನು ಇಲ್ಲಿಗೆ ಕರೆಸುತ್ತೇನೆ. ನೀನು ನೋಡು. ಇಲ್ಲಿ ಸ್ಟುಡಿಯೋದಲ್ಲಿ ಎರಡು ಮೂರು ವಾರಗಳು ಅಲೆಯುತ್ತಿದ್ದರೆ ಅವನಿಗೆ ನವ ಭಾವಗಳೆಲ್ಲವೂ ಬಂದು ಬಿಡುತ್ತವೆ. ಅವನು ಹುಟ್ಟು ಕಲೆಗಾರ " ಎಂದನು.

ಇತರ ಪಾತ್ರಗಳ ವಿಚಾರವಾಗಿ ಮಾತು ಬಂದಿತು.

ವಿಜಯನು " ಹುಡುಕೋಣ. ಅದಕ್ಕೇನಲ್ಲಾ ನಟನಟಿಯರನ್ನು ಹೊಂದಿಸುವುದು ಕಷ್ಟವಿಲ್ಲ " ಎಂದನು.

ಭಟ್ಟನು " ವಿಜಯ. ನಾನೊಂದು ಮಾತು ಕೇಳಲೇ ? ನೀನೇಕೆ ಶಿವನ ಪಾತ್ರವನ್ನು ಧಾರಣೆ ಮಾಡಬಾರದು ? ಎಂದನು.

ವಿಜಯನು " ಎರಡು ಕಾರಣಗಳಿವೆ. ನನ್ನ ಶರೀರದ ಆಕಾರವು ಸ್ವಲ್ಪ ಕಡಿಮೆ. ಮಹಾದೇವನ ಪಾತ್ರವನ್ನು ಅಭಿನಯಿಸಬೇಕಾದರೆ ಮಹಾ ಪುರುಷ ಲಕ್ಷಣಗಳಿರಬೇಕು. ಅದು ಮೊದಲನೆಯ ಕಾರಣ. ಸರಿಯಾದ ನಟನು ದೊರೆಯದಿದ್ದರೆ ನಾನೇ ಆ ಪಾತ್ರವನ್ನು ಅಭಿನಯಿಸಬೇಕೆಂದಿದ್ದೇನೆ. ಎಲ್ಲ ನಟರಿಗಿಂತಲೂ ನಾನು ಚೆನ್ನಾಗಿ ಅಭಿನಯಿಸ ಬಲ್ಲನೆಂಬ ಧೈರ್ಯವಿದ್ದರೂ ನಾನು ಎರಡನೆಯ ತರಗತಿಯ ನಟನಾಗಿ ಬಿಡುವೆನೇನೋ ಎಂಬ ಸಂದೇಹವಿದೆ. ಎರಡನೆಯ ಕಾರಣವು ಅದಕ್ಕಿಂತಲೂ ಮುಖ್ಯವಾದುದು.

"ಕೇಳು. ಪ್ರತಿಯೊಂದು ಪಾತ್ರದ ಮಾತು, ಅಭಿನಯ, ನೋಟ, ಆಕಾರಾದಿಗಳನ್ನು ಸರ್ವದಾ ನಾನು ಕಣ್ಣಿಟ್ಟು ನೋಡುತ್ತಿರಬೇಕು. ನಾನು ಸ್ವಂತ ಅಭಿನಯದಲ್ಲಿ ಮನವಿಟ್ಟರೆ ಅಷ್ಟು ಸೂಕ್ಷ್ಮವಾಗಿ ಎಲ್ಲರ ಅಭಿನಯವನ್ನು ಗಮನಿಸುವುದೆಂತು ? ನನ್ನ ದೋಷಗಳನ್ನೇ ನಾನು ಕಂಡುಕೊಳ್ಳುವುದೆಂತು ? ಅದಕ್ಕಾಗಿ ನಾನು ಶಿವನ ಪಾತ್ರವನ್ನು ಅಭಿನಯಿಸುವುದಿಲ್ಲ " ಎಂದನು.

ಭಟ್ಟನು ಆ “ ಸೂಕ್ಷ್ಮ ದಿಗ್ದರ್ಶನದ ಕಾರ್ಯವು ಡೈರೆಕ್ಟರನದಲ್ಲವೇನು ?” ಎಂದು ಕೇಳಿದನು.

ವಿಜಯನು “ ಸಮರ್ಥನಾದ ಡೈರೆಕ್ಟರನೂ ಇರಬೇಕು. ಕಥಾ ನಿರ್ಮಾಣಕನಾದ ಕವಿಯ ದೃಷ್ಟಿಯು ಅದಕ್ಕಿಂತಲೂ ಸೂಕ್ಷ್ಮವಾಗಿರಬೇಕು. ಇವೆರಡು ಶಕ್ತಿಗಳ ಸಮರಸದಿಂದ ನಿರ್ಮಾಣವಾಗುವ ಚಿತ್ರಪಟವು ಅದ್ಭುತವಾಗಿ ಪರಿಣಮಿಸುತ್ತದೆ ” ಎಂದು ಹೇಳಿದನು.

ರಾತ್ರಿ ಬಹಳ ಹೊತ್ತಾಗಿತ್ತು. ಸುಮಾರು ಅರ್ಧ ರಾತ್ರಿಯು ಅತಿಕ್ರಮಿಸಿರಬಹುದು. ಇಬ್ಬರೂ ಹೋಗಿ ಮಲಗಿದರು. ಭಟ್ಟನ ಮನಸ್ಸಿನ ಮೇಲೆ ಪುನಃ ರೇವಾದೇವಿಯ ಜ್ಞಾಪಕವು ನರ್ತಿಸುತ್ತಿತ್ತು.

ವಿಜಯನ ತಲೆಯಲ್ಲಿ ಕಥೆಯ ಆವೇಶವು ಏರಿ ನಿದ್ರೆ ಬಾರದಂತೆ ಬೆಳಕು ಹರಿಸಿಬಿಟ್ಟಿತು.

ಮಾರನೆಯ ದಿನ ಭಟ್ಟನೂ ವಿಜಯನೂ ಶಾಂತಾರಾಂರವರ ಭೇಟಿ ಮಾಡಿದರು. ಅವರೊಡನೆ ತಮ್ಮ ಚಿತ್ರದ ವಿವರಗಳನ್ನೆಲ್ಲಾ ಚರ್ಚಿಸಿದರು. ಶಾಂತಾರಾಂರವರು ಕಥೆಯ ನಿರ್ಮಾಣ, ಸನ್ನಿವೇಶಗಳು, ಸೀನರಿಗಳು, ಎಲ್ಲ ವಿಚಾರಗಳನ್ನೂ ಆಸಕ್ತಿಯಿಂದ ಕೇಳಿದರು, ಕವಿರಾಜನ ಕಲ್ಪನಾ ಶಕ್ತಿಯನ್ನು ಅತ್ಯಧಿಕವಾಗಿ ಪ್ರಸಂಸೆ ಮಾಡಿದರು. ಭಟ್ಟನು ಈ ಚಿತ್ರಕ್ಕೆ ಡೈರೆಕ್ಟರಾಗಬೇಕೆಂದು ಶಾಂತಾರಾಂರನ್ನು ಪ್ರಾರ್ಥನೆ ಮಾಡಿದನು.

ಶಾಂತಾರಾಂರು “ ಈ ಚಿತ್ರಕ್ಕೆ ಎಷ್ಟು ಹಣವನ್ನು ಅಂದಾಜು ಮಾಡಿದ್ದೀರಿ ” ಎಂದು ಕೇಳಿದರು.

“ ಇಪ್ಪತ್ತು ಲಕ್ಷ ರೂಪಾಯಿಗಳು ”

“ ಸರಿ, ಸರಿಯಾಗಿದೆ. ನಿಮಗೆ ಹಣಕ್ಕೇನೂ ಕೊರತೆಯಿಲ್ಲ. ಆದರೂ ಈ ಕಾಲದಲ್ಲಿ ಚಿತ್ರಪಠವನ್ನೂ ಅದಕ್ಕೆ ಖರ್ಚು ಮಾಡುವ ಹಣವನ್ನೂ ತೂಗಿ ನೊಡಬೇಕಾಗುತ್ತದೆ. ೨೦ ಲಕ್ಷ ರೂಪಾಯಿಗಳು ಸರಿಯಾಗಿದೆ.

ಇನ್ನೂ ಐದು ಲಕ್ಷಗಳನ್ನಾದರೂ ನೀವು ಖರ್ಚು ಮಾಡಬಲ್ಲಿರಿ ” ಎಂದು ಶಾಂತಾರಾಂರು ಹೇಳಿದರು.

ಪುನಃ “ ಯಾವ ಸ್ಟುಡಿಯೋದಲ್ಲಿ ಗೊತ್ತು ಮಾಡುತ್ತೀರಿ ?” ಎಂದು ಪ್ರಶ್ನಿಸಿದರು.

“ ನವಭಾರತ್ ಸ್ಟುಡಿಯೋವನ್ನು ಪೂರ್ತಿಯಾಗಿ ಒಂದು ವರುಷ ಬಾಡಿಗೆಗೆ ಮಾತನಾಡಿದ್ದೇವೆ ”

“ ಪೂರ್ಣವಾಗಿ ಆ ಸ್ಟುಡಿಯೋ ನಿಮ್ಮ ಅಧೀನದಲ್ಲಿರುತ್ತದೆಯೋ ?”

“ ಹೌದು. ಹಾಗೆಯೇ ಕರಾರಾಗಿದೆ ”

“ ಮುಖ್ಯವಾದ ಸ್ಟಾರ್‌ಗಳು ಯಾರು ?”

“ ವಿಮಲಾದೇವಿ. ಗಣಪತಿರಾವ್ ಇವರೇ ಮುಖ್ಯವಾದ ಸ್ಟಾರ್‌ಗಳು”

ಶಾಂತಾರಾಂರು ಸ್ವಲ್ಪ ಹೊತ್ತು ತಲೆಯನ್ನು ಮೇಲಕ್ಕೆತ್ತಿ ಆಲೋಚನೆ ಮಾಡಿದರು.

“ ಹೊಸ ಸ್ಟಾರ್‌ಗಳು ! ಪಳಗಿದವರಾಗಿದ್ದರೆ ಚೆನ್ನಾಗಿತ್ತು. ಆದರೂ ಆರಂಭದಲ್ಲಿಯೇ ಗೊತ್ತಾಗಿ ಹೋಗುತ್ತದೆ. ಪ್ರಭಾವ, ಪ್ರಕಾಶಗಳು ಕಾಣದೇ ಹೋದರೆ ಅವರನ್ನು ಬಿಟ್ಟುಬಿಡಬೇಕಾಗುತ್ತದೆ. ಇನ್ನೂ ಕರಾರು ಮಾಡಿಲ್ಲವಷ್ಟೆ ?” ಎಂದು ಕೇಳಿದರು.

“ ಇಲ್ಲ. ನೀವು ನೋಡಿ ಒಪ್ಪದೇ ನಾವು ಕರಾರು ಮಾಡುವುದಿಲ್ಲ ”

ಶಾಂತಾರಾಂರು “ ಅದು ಸರಿ, ಇದನ್ನೆಲ್ಲಾ ಒಳ್ಳೆಯ ಅನುಭವಸ್ಥರಿಗಿಂತಲೂ ಚೆನ್ನಾಗಿ ಯೋಚನೆ ಮಾಡಿದ್ದೀರಿ ” ಎಂದು ಹೇಳಿದರು.

ಶಾಂತಾರಾಂರವರು “ ಒಂದು ಮಾತಿದೆ. ಬಹಳ ಸಂಕೋಚವಾಗುತ್ತದೆ. ಆದರೂ ವ್ಯಾಪಾರವೇನೋ ವ್ಯಾಪಾರವೇ. ತಮ್ಮ ವ್ಯಾಪಾರದಲ್ಲಿ ಪಾಲುಗಾರರಾದರೂ ಉಂಟೋ ?'' ಎಂದರು.

“ ಉಂಟು. ಇನ್ನೊಬ್ಬ ಪಾಲುಗಾರರಿದ್ದಾರೆ ”

ಶಾಂತಾರಾಂರು “ ಅದರಲ್ಲಿ ಏನೂ ಗುಟ್ಟಿಲ್ಲದಿದ್ದರೆ ದಯವಿಟ್ಟು ಹೇಳಿರಿ. ಅದನ್ನು ತಿಳಿಯದೇ ನಾನು ಒಪ್ಪಬಾರದು ” ಎಂದರು.

ಭಟ್ಟನು “ ನಮ್ಮ ವ್ಯಾಪಾರದಲ್ಲಿ ಗುಟ್ಟೇನೂ ಇಲ್ಲ. ಯುನೈಟೆಡ್

ಪಿಕ್ಚರ್ಸ್‌ನ ಮಾಲೀಕರಾದ ಪ್ರಭುರಾಜ್‌ರವನು ಈ ಚಿತ್ರಕ್ಕೆ ಸಮಸಮ ಅರ್ಧ ಮಾಲೀಕರು " ಎಂದನು.

ಶಾಂತಾರಾಂರ ತುಟಿಯ ಅಂಚಿನಲ್ಲಿ ಸಣ್ಣ ನಗುವು ಕಂಡಿತು. ಅವರು ತಲೆದೂಗಿ "ಭಟ್ಟರೇ. ಕ್ಷಮಿಸಬೇಕು. ನೀವು ಪ್ರಭುರಾಜ್‌ರೊಡನೆ ನನ್ನ ಪ್ರಸ್ತಾಪವನ್ನು ಮಾಡಿದ್ದೀರಾ ?" ಎಂದು ಕೇಳಿದರು.

" ಇಲ್ಲ, ಅದರ ಅಗತ್ಯವೇನೂ ಇಲ್ಲ. ಇದನ್ನೆಲ್ಲಾ ಏರ್ಪಾಡು ಮಾಡುವ ಪೂರ್ಣ ಅಧಿಕಾರವು ನನ್ನದಾಗಿರುತ್ತದೆ. ಪ್ರಭುರಾಜ್‌ರ ಅನುಭವವು ನನಗೆ ಚೆನ್ನಾಗಿದೆ. ಅವರು ಬಹಳ ದೊಡ್ಡ ಮನುಷ್ಯರು. ಒಂದು ಮಾತಿಗೂ ಅಡ್ಡಿ ಬರುವವರಲ್ಲ " ಎಂದು ಭಟ್ಟನು ಹೇಳಿದರು.

ಶಾಂತಾರಾಂರು " ಅದು ನಿಮ್ಮ ಅನುಭವ. ನನ್ನ ಮಾತು ಬೇರೆ. ನಮಗೂ ಅವರಿಗೂ ಕೂಡುವುದೇ ಇಲ್ಲ. ನೀವು ಕ್ಷಮಿಸಿರಿ. ನಾನು ಈ ಚಿತ್ರದಲ್ಲಿ ಸಹಾಯ ಮಾಡುವಂತಿಲ್ಲ. ನಿಮ್ಮ ನನ್ನ ಸ್ನೇಹಕ್ಕೆ ಬಾಧಕವೇನೂ ಇಲ್ಲ. ಚಿತ್ರ ನಿರ್ಮಾಣದಲ್ಲಿ ನಿಮಗೆ ಯಾವ ಸಲಹೆಗಳನ್ನಾದರೂ ಕೊಡಲು ನಾನು ಸಿದ್ಧವಾಗಿದ್ದೇನೆ " ಎಂದು ಹೇಳಿ ಆಸನದಿಂದೆದ್ದು ದೊಡ್ಡ ನಗುವನ್ನು ನಗುತ್ತಾ, ಇಬ್ಬರಿಗೂ ಷೇಕ್ ಹ್ಯಾಂಡ್ ಮಾಡಿಬಿಟ್ಟರು.

ಭಟ್ಟನು ಅಪ್ರತಿಭನಾದನು· ಕವಿಯು ನೊಂದ ಮನಸ್ಸಿನಿಂದ ತಲೆಬಾಗಿದನು. ಇಬ್ಬರೂ ಎದ್ದು " ಮತ್ತೊಮ್ಮೆ ಬರುತ್ತೇವೆ " ಎಂದು ಹೇಳಿದರು.

ಶಾಂತಾರಾಂರು " ನನ್ನ ಮನೆಯು ನಿಮಗೆ ಯಾವಾಗಲೂ ತೆರೆದ ಬಾಗಿಲು. ನಿಮಗೆ ಕೊಟ್ನೀಸ್ ಚಿತ್ರವನ್ನು ಕೊಡುವಾಗ ಹೇಗೆ ಧಾರಾಳ ಮನಸ್ಸಿನಿಂದ ಕೊಟ್ಟೆನೋ ಈಗಲೂ ಹಾಗೆಯೇ. ಹಣದ ವಿಷಯದಲ್ಲಿ ಒಂದು ಮಾತಿದೆ. ನಾನು ಇತರರ ಚಿತ್ರದಲ್ಲಿ ಮಾಲೀಕತನವನ್ನು ವಹಿಸುವುದಿಲ್ಲ. ಆದರೆ ನಿಮಗೆ ಎಷ್ಟು ಹಣವನ್ನಾದರೂ ಬೇರೆಯವರಿಂದ ಕೊಡಿಸಬಲ್ಲೆ. ನೀವು ಪ್ರಭುರಾಜರ ಹತ್ತಿರ ಹೋಗುವ ಅಗತ್ಯವಿರಲಿಲ್ಲ " ಎಂದರು.

ಭಟ್ಟನು ಉತ್ತೇಜಿತನಾಗಿ " ಶಾಂತಾರಾಂರವರೇ ! ಹಣದ ಪ್ರಶ್ನೆಯು ಯಾವಾಗಲೂ ಬರಲಿಲ್ಲ. ಈಗಲೂ ಇಲ್ಲ. ನಿಮ್ಮ ಅನುಗ್ರಹ

ದಿಂದ ೨೫ ಲಕ್ಷ ರೂಪಾಯಿಗಳ ಒಂದೇ ಚಕ್ಕನ್ನು ಪ್ಯಾಸ್ ಮಾಡಬಲ್ಲೆ. ನಾನು ಈ ಊರಿಗೆ ಬಂದಾಗಿನಿಂದ ನಿಮ್ಮ ಸ್ನೇಹವನ್ನು ಹೇಗೆ ಮಾಡಿದೆನೋ ಪ್ರಭುರಾಜರವರ ಸ್ನೇಹವೂ ಹಾಗೆಯೇ ಬೆಳೆಯಿತು. ಅವರು ಅಪೇಕ್ಷಿಸಲಿಲ್ಲ. ನಾನೇ ಈ ಪಾಲುಗಾರಿಕೆಯನ್ನು ಗೊತ್ತು ಮಾಡಿದೆ" ಎಂದು ಹೇಳಿದನು.

ಇಬ್ಬರೂ ಹೊರಟು ಹೋದರು.

ಭಟ್ಟನು ಕಾರಿನಲ್ಲಿ ಕುಳಿತು ಹೋಗುತ್ತಾ "ವಿಜಯಾ, ಈಗೇನು ಹೇಳುವೆ ?" ಎಂದು ಕೇಳಿದನು.

ವಿಜಯನು "ದೊಡ್ಡ ಪ್ರಶ್ನೆ, ಸಾಮಾನ್ಯವಾದುದಲ್ಲ. ಪ್ರಸಿದ್ಧರಾದ ಡೈರೆಕ್ಟರ ಹೆಸರಿದಿದ್ದರೆ ವ್ಯಾಪಾರ ದೃಷ್ಟಿಯಿಂದ ಚಲೋ ಆಗುತ್ತಿತ್ತು. ಈಗ ದೊಡ್ಡ ಜವಾಬ್ದಾರಿಯು ನನ್ನ ಮೇಲೆ ಬಿದ್ದಿದೆ. ಹುಡುಕುತ್ತೇನೆ. ದೇವರು ಸಹಾಯ ಮಾಡುತ್ತಾನೆ" ಎಂದು ಹೇಳಿದನು.

ಡ್ರೈವರನು "ಕಾರು ಎಲ್ಲಿಗೆ ಹೋಗಬೇಕು" ಎಂದು ಕೇಳಿದನು.

ಭಟ್ಟನು ಮೋರ್ಗ್ ಲೈನಿಗೆ ಬಿಡು ಎಂದು ಹೇಳಿದನು.

ಕಾರು ಮೋರ್ಗ್ ಲೈನಿಗೆ ಹೋಯಿತು. ಭಟ್ಟನು ಮನೆಯ ಗುರುತನ್ನು ತೋರಿಸಿದನು. ವಿಮಲೆಯ ಮನೆಯ ಮುಂದೆ ಕಾರು ನಿಂತಿತು. ಇಬ್ಬರೂ ಕಾರಿನಿಂದ ಇಳಿದರು. ಮಹಡಿಯ ಮೆಟ್ಟಲುಗಳನ್ನು ಹತ್ತಿ ಹೋಗಿ ಬಾಗಿಲು ಸದ್ದು ಮಾಡಿದರು. ಬಾಗಿಲು ತೆಗೆಯಿತು.

ಚಾಚಾ ಬಂದು ಬಾಗಿಲು ತೆಗೆದನು.

ಭಟ್ಟನು "ವಿಮಲಾ ದೇವಿಯುವರಿದ್ದಾರೋ ?" ಎಂದು ಕೇಳಿದನು.

ಚಾಚಾ "ಇದ್ದಾರೆ. ನಾಲ್ಕಾರು ದಿನಗಳಿಂದ ಶರೀರದಲ್ಲಿ ಆಲಸ್ಯವಿದೆ" ಎಂದು ಹೇಳಿದನು.

ವಿಜಯನು ಹಜಾರದಲ್ಲಿ ರತ್ನಕಂಬಳಿಯ ಮೇಲೆ ಕುಳಿತುಕೊಂಡನು. ಸಿಗರೇಟ್ ತೆಗೆದು ಹತ್ತಿಸಿದನು.

ಭಟ್ಟನು ವಿಮಲೆಯ ಕೋಣೆಯೊಳಗೆ ಹೋದನು. ವಿಮಲೆಯು ಮಲಗಿದ್ದ ಹಾಸಿಗೆಯಿಂದ ಮೆಲ್ಲಗೆ ಏಳುತ್ತಿದ್ದಳು. ಭಟ್ಟನು ಹಾಸಿಗೆಯ ಹತ್ತಿರ ಹೋಗಿ ಕುಳಿತುಕೊಂಡು "ಮಲಗಿಕೋ, ನಿನಗೆ ಏನಾಗಿದೆ ?"

ಎಂದು ಕೇಳುತ್ತಾ, ವಿಮಲೆಯನ್ನು ಬಲಾತ್ಕಾರವಾಗಿ ಮಲಗಿಸಿದನು.

ವಿಮಲೆಯು "ಏನೂ ಇಲ್ಲ, ಈಗ ಜ್ವರವಿಲ್ಲ. ಆದರೂ ಶರೀರದಲ್ಲಿ ತ್ರಾಣವಿಲ್ಲ" ಎಂದು ಹೇಳಿದಳು.

ಭಟ್ಟನು "ಏನಾಗಿತ್ತು ? ಏಕೆ ಇಷ್ಟು ಕೃಶಳಾಗಿರುವೆ ? ಯಾರು ಔಷಧಿ ಕೊಡುತ್ತಾರೆ ?" ಎಂದು ಕೇಳಿದನು.

ವಿಮಲೆಯು "೨೦ ದಿನಗಳ ಹಿಂದೆ ಸಣ್ಣ ಜ್ವರ ಬಂದಿತು. ಆಗ ಮೋಡವಾಗಿತ್ತು. ಮಳೆ ಬರುತ್ತಿತ್ತು. ಸ್ವಲ್ಪ ಮಳೆಯಲ್ಲಿ ನೆನೆದಿದ್ದೆ. ಜ್ವರವು ಸಾಮಾನ್ಯವೆಂದುಕೊಂಡೆ. ಮೂರು ನಾಲ್ಕು ದಿನಗಳಲ್ಲಿ ಜ್ವರವು ಪ್ರಕೋಪಾವಸ್ಥೆಗೆ ಬಂದಿತು. ಡಾಕ್ಟರನ್ನು ಕರೆಸಿದೆ. ಅವರು ಪರೀಕ್ಷಿಸಿ ನೋಡಿ ನಿಮೋನಿಯಾ ಆಗಿದೆ ಎಂದು ಹೇಳಿದರು. ಔಷಧಿಗಳನ್ನು ಕೊಟ್ಟರು. ಜ್ವರವು ಗುಣವಾಗಿದೆ" ಎಂದಳು.

"ಡಾಕ್ಟರಾರು ?" ಎಂದು ಭಟ್ಟನು ಕೇಳಿದನು.

"ಡಾಕ್ಟರು ಘಾಂಡೇಕರ್‌ರವರು. ಒಳ್ಳೆಯ ಅನುಭವಸ್ಥರು. ಗಿರಿಗಾಂವ್‌ನಲ್ಲೆಲ್ಲಾ ಬಹಳ ಪ್ರಸಿದ್ಧರಾದವರು" ಎಂದು ಹೇಳಿದಳು.

ಭಟ್ಟನು "ಕವಿರಾಜ, ಇಲ್ಲಿ ಬಾ. ನಮ್ಮ ಸ್ಟಾರ್ ರೋಗಗ್ರಸ್ತವಾಗಿದ್ದಾಳೆ" ಎಂದು ಕರೆದನು.

ವಿಜಯನು ಕೋಣೆಯೊಳಗೆ ಬಂದನು. ವಿಮಲೆಯು ಮಂದಹಾಸವನ್ನು ವ್ಯಕ್ತಪಡಿಸಿ ಕೈ ಮುಗಿದಳು. ವಿಜಯನು ಸಮೀಪದಲ್ಲಿ ಕುರ್ಚಿಯ ಮೇಲೆ ಕುಳಿತುಕೊಂಡನು.

ಭಟ್ಟನು "ವಿಮಲೆ, ಕವಿರಾಜನು ನಮ್ಮ ಚಿತ್ರವನ್ನು ಸಿದ್ಧಪಡಿಸುತ್ತಿದ್ದಾನೆ. ನೀನೇ ಪಾರ್ವತಿಯಂತೆ" ಎಂದು ಹೇಳಿದನು.

ವಿಮಲೆಯು ಉತ್ಸಾಹದಿಂದ ಎದ್ದು ಕುಳಿತಳು. "ನನ್ನ ಅಭೀಷ್ಟವು ಸಿದ್ಧಿಸಿದಂತಾಯಿತು. ಒಂದು ವರುಷದಿಂದ ನಾನು ತಪಸ್ಸು ಮಾಡುತ್ತಿದ್ದೆ. ನನ್ನ ಖಾಯಿಲೆಯನ್ನು ಲೆಕ್ಕಿಸಬೇಡಿರಿ. ಇಂದೇ ನಾನು ಸಿದ್ಧ" ಎಂದು ಹೇಳಿದಳು.

ಭಟ್ಟನು ನಗುತ್ತಾ ವಿಮಲೆಯ ತಲೆ ಸವರುತ್ತಾ "ವಿಮಲೆ, ಮಲಗಿಕೋ. ಆಯಾಸ ಮಾಡಿಕೊಳ್ಳಬೇಡ. ನಾವಿನ್ನೂ ಕೈಲಾಸವನ್ನು

ನಿರ್ಮಾಣ ಮಾಡಬೇಕು. ಮಹಾದೇವನನ್ನು ಹುಡುಕಿ ಕರೆತರಬೇಕು. ಅವನಿಗೆ ನಿನ್ನನ್ನು ಅರ್ಪಣ ಮಾಡಿ ಕೃತಾರ್ಥರಾಗಬೇಕು ” ಎಂದನು.

ವಿಮಲೆಗೆ ನಾಚಿಕೆಯಾಯಿತು. ಸೆರಗಿನಿಂದ ಅರ್ಧ ಮುಖವನ್ನು ಮುಚ್ಚಿಕೊಂಡು “ ನೀವು ಹಾಸ್ಯ ಮಾಡುತ್ತೀರಿ ” ಎಂದು ಹೇಳಿ ಮಲಗಿಕೊಂಡಳು.

ಭಟ್ಟನು “ಹಾಸ್ಯವಲ್ಲ, ನಿಜ ! ನಿಜ!! ಈಗ ಶಿವ ಪಾರ್ವತಿ ಪಠವನ್ನು ತಯಾರಿಸಲು ಲಗುಬಗೆಯಿಂದ ಪ್ರಯತ್ನವು ನಡೆಯುತ್ತಿದೆ. ನಿನ್ನದೇ ಪ್ರಧಾನ ಪಾತ್ರ. ನೀನು ಸುಧಾರಿಸಿಕೋ, ಔಷಧಿಗಳನ್ನು ಸೇವಿಸಿ, ಸಿದ್ಧ ಳಾಗು” ಎಂದು ಹೇಳಿದನು.

ಗೆಳೆಯರಿಬ್ಬರೂ ಮನೆಗೆ ಹೋಗಿ ಸೇರುವ ಹೊತ್ತಿಗೆ ಮಧ್ಯಾಹ್ನ ವಾಗಿತ್ತು. ಊಟ ಮಾಡಿ ಕುಳಿತು ಕೊಂಡರು.

ಭಟ್ಟನು “ ಡೈರೆಕ್ಟರು ಬೇಕಲ್ಲಾ. ಏನು ಮಾಡುವುದು ” ಎಂದು ಕೇಳಿದನು.

ವಿಜಯನು “ ನಮ್ಮ ಸಿದ್ಧತೆಯನ್ನೆಲ್ಲಾ ಮಾಡೋಣ. ಅಷ್ಟರಲ್ಲಿ ಶಾಂತಾರಾಂರವರೇ ಬದಲಾವಣೆಯಾಗ ಬಹುದು. ಸ್ನೇಹ–ಅಸಮಾಧಾನ ಗಳು ಶಾಶ್ವತವಲ್ಲ. ಅಥವಾ ಯಾರಾದರೂ ಇನ್ನೂ ಸಮರ್ಥರು ದೊರೆಯ ಬಹುದು. ಡೈರೆಕ್ಟರುಗಳು ಎಷ್ಟೋ ಜನರಿದ್ದಾರೆ. ಚಿತ್ರಪಟದಿಂದ ಡೈರೆಕ್ಟರುಗಳಿಗೆ ಹೆಸರು ಬರುತ್ತದೆ. ಡೈರೆಕ್ಟರ ಹೆಸರಿನಿಂದ ಚಿತ್ರಪಟದ ಅಂತಸ್ತು ಏರುವುದು ಅಪರೂಪ ” ಎಂದು ಹೇಳಿದನು.

## ೩

ನವಭಾರತ್ ಸ್ಟುಡಿಯೋವನ್ನು ಕರಾರು ಮಾಡಿ ಸ್ವಾಧೀನಕ್ಕೆ ತೆಗೆದು ಕೊಳ್ಳಲು ಎರಡು ವಾರಗಳಾದವು. ಗೋಡ್‌ಬೋಲೆ ಎಂಬ ಫೋಟೋ ಗ್ರಾಫರ್ ಆ ಸ್ಟುಡಿಯೋವಿನಲ್ಲಿ ಕೆಲಸದಲ್ಲಿದ್ದನು. ಅವನು ಬಂದು ವಿಜಯನನ್ನು ಭೇಟಿ ಮಾಡಿದನು. ವಿಜಯನು ಆದರದಿಂದ ಅವನನ್ನು ಕೂಡಿಸಿಕೊಂಡು ಮಾತು ಕತೆಗಳನ್ನಾಡಿದನು.

ವಿಜಯನು–" ನೀವೆಷ್ಟು ದಿನಗಳಿಂದ ಈ ವೃತ್ತಿಯಲ್ಲಿ ಕೈ ಹಾಕಿದ್ದೀರಿ " ಎಂದನು.

ಗೋಡ್‌ಬೋಲೆಯು– " ಸುಮಾರು ೨೦ ವರುಷಗಳಾಗಿರಬಹುದು" ಎಂದನು.

" ಯಾವ ಯಾವ ಚಿತ್ರಪಟಗಳನ್ನು ಫೋಟೋ ತೆಗೆದಿದ್ದೀರಿ ?"

" ಅದು ಒಂದು ದೊಡ್ಡ ಪುರಾಣ. ಅದನ್ನೆಲ್ಲಾ ಹೇಳಿ ಫಲವಿಲ್ಲ. ನೋಡಿ, ಡೈರೆಕ್ಟರಿಗೆ ಅಸಮಾಧಾನವಾದರೆ ನಮ್ಮನ್ನು ಕಳುಹಿಸಿ ಬಿಡುತ್ತಾರೆ. ಮುಖ್ಯ ನಟ–ನಟಿಯರಿಗೆ ಸರಿಬೀಳದಿದ್ದರೆ–ನಮ್ಮ ಕೆಲಸ ಕೆಟ್ಟಂತೆಯೇ. ಮಾಲೀಕರು–ಆಡಳಿತಗಾರರಿಗೆ ಅಸಮಾಧಾನವಾದರೆ ಮುಗಿದೇ ಹೋಯಿತು. ಶಾಂತಾರಾಂರವರ ಸಹವಾಸದಲ್ಲಿಯೂ ದಣಿದಿದ್ದೇನೆ.

ವಿಜಯಭಟ್‌ರೊಡನೆಯೂ ಕಷ್ಟಪಟ್ಟಿದ್ದೇನೆ. ಎಲ್ಲಿಯೂ ಕಡೆಯವರೆಗೆ ಇದ್ದು ಪರದೆಯ ಮೇಲೆ ನಮ್ಮ ಹೆಸರು ಬೀಳುವ ಪುಣ್ಯ ದೊರೆಯಲಿಲ್ಲ "

" ಕೆಲವು ಪಟಗಳ ಮೇಲೆ ನಿಮ್ಮ ಹೆಸರು ನೋಡಿದ್ದೆನಲ್ಲಾ ?"

" ಅದೆಲ್ಲಾ ಹೊಟ್ಟೆಯ ಪಾಡಿಗಾಗಿ ದುಡಿದ ದುಡಿತ. ಹೆಸರು ಬರುವಂಥಹದಲ್ಲ "

" ಫೋಟೋಗ್ರಫಿ ಚೆನ್ನಾಗಿದ್ದರೆ ಹೆಸರು ಬರುವುದಿಲ್ಲವೆ ?"

" ಪ್ರೇಕ್ಷಕರಲ್ಲಿ ಎಷ್ಟು ಮಂದಿ ಫೋಟೋಗ್ರಫಿಯ ಕಲೆಯನ್ನು ನೋಡುತ್ತಾರೆ ? ನಟನಟಿಯರು, ಸಂಗೀತ, ನರ್ತನ, ಸೀನರಿ, ಕಥೆ ಈ ಕಡೆಗೇ ಜನರ ದೃಷ್ಟಿ. ಅದೆಲ್ಲಾ ಅಣಿಯಾಗುವುದು ಸಾಮಾನ್ಯವಲ್ಲ. ಅದು ಫೋಟೋಗ್ರಾಫರ್‌ರ ಕೈಯಲ್ಲಿಲ್ಲ "

" ನೀವು ಪರದೇಶಗಳನ್ನು ನೋಡಿದ್ದೀರೊ ?"

" ಹೌದು. ನೋಡಿದ್ದೇನೆ. ಜರ್ಮನಿ, ಫ್ರಾನ್ಸ್, ಅಮೇರಿಕಾಗಳಲ್ಲಿ ಅತಿ ಕಷ್ಟಪಟ್ಟು ಶಿಕ್ಷಣ ಪಡೆದಿದ್ದೇನೆ. ನನ್ನ ಬಳಿ ಸರ್ಟಿಫಿಕೇಟ್‌ಗಳಿವೆ " ಎಂದು ಕೈ ಚೀಲದಿಂದ ಸರ್ಟಿಫಿಕೇಟ್‌ಗಳನ್ನು ತೆಗೆದು ವಿಜಯನ ಕೈಗೆ ಕೊಟ್ಟನು.

ವಿಜಯನು ಆ ಸರ್ಟಿಫಿಕೇಟ್‌ಗಳನ್ನು ನೋಡಿಕೊಂಡು ಮೇಜಿನ ಮೇಲಿಟ್ಟನು.

"ಗೋಡ್ಬೋಲೆ. ನಿಮಗೆ ಈ ಸ್ಟುಡಿಯೋದವರು ಎಷ್ಟು ಸಂಬಳ ಕೊಡುತ್ತಿದ್ದರು ?"

" ಮುನ್ನೂರೈವತ್ತು ರೂಪಾಯಿ ಖಾಯಂ ಸಂಬಳ. ಹೊರಗಿನವರು ಚಿತ್ರ ಪಟ ತಯಾರಿಸಿದರೆ, ಅದಕ್ಕೆ ಬೇರೆ ಕಂಟ್ರಾಕ್ಟು "

" ಅಷ್ಟು ಕಡಿಮೆ ಸಂಬಳವು ನಿಮಗೆ ಸಾಕಾಗುತ್ತಿತ್ತೇನು ?"

" ಅದೇಕೆ ಕೇಳುತ್ತೀರಿ ? ಎಂದೂ ಸರಿಯಾಗಿ ಆ ಸಂಬಳ ಬಂದೇ ಇಲ್ಲ. ಹೊರಗಿನವರು ಯಾರಾದರೂ ಚಿತ್ರ ತೆಗೆದರೆ ಕೈಗೆ ಸ್ವಲ್ಪ ಹಣ ಸಿಕ್ಕುತ್ತಿತ್ತು. ಈಗ ಆರು ತಿಂಗಳಿಂದ ಸಂಬಳವೂ ಇಲ್ಲ. ಸಾರಿಕೆಯೂ ಇಲ್ಲ"

" ಅದೇಕೆ ಈ ಸ್ಟುಡಿಯೋ ಹೀಗಾಗಿದೆ ?"

" ಅದರ ಯಜಮಾನರು ಮಾರ್‍ವಾಡಿಗಳು. ನಿಮಗೆ ಗೊತ್ತೇ ಇದೆ.

ಕಟ್ಟಡದ ಮಾಲೀಕರು ಗುಜರಾತಿಗಳು. ಚಿತ್ರಪಟ ತೆಗೆಯುವವರ ಕೈಯ್ಯಲ್ಲಿ ಪೂರಾ ಹಣವಿರುವುದಿಲ್ಲ. ಬಂದು ಅಟಾಟೋಪ ಮಾಡುತ್ತಾರೆ. ಮಾರ್ವಾಡಿಗಳು ತಮಗೆ ಬರಬೇಕಾದ ದುಡ್ಡನ್ನೆಲ್ಲಾ ಒಂದೇ ಗಂಟೆನಲ್ಲಿ ಎಳೆದು ಬಿಡುತ್ತಾರೆ. ಪ್ರತಿಯೊಂದಕ್ಕೂ ಅಡ್ಡಿ ಆತಂಕಗಳು ಉಂಟೇ ಉಂಟು. ಹೀಗಾಗಿ ಈ ಸ್ಟುಡಿಯೋ ಮೂಲೆಗೆ ಬಿದ್ದಿದೆ "

" ಕ್ಯಾಮರಾಗಳು, ಲೈಟ್ ಏರ್ಪಾಡು, ಇವೆಲ್ಲಾ ಚೆನ್ನಾಗಿವೆಯೋ?"

" ಸೊಗಸಾಗಿವೆ. ಈ ಯಂತ್ರೋಪಕರಣಗಳ ಯೋಗ್ಯತೆಯನ್ನರಿತವರು ಬಂದು ನೋಡಲಿ. ಎಂಥಾ ಉತ್ತಮೋತ್ತಮ ಯಂತ್ರಸಾಧನಗಳೆಂಬುದನ್ನು ವಿವರಿಸುತ್ತೇನೆ "

" ಒಳ್ಳೆಯದು, ನಿಮಗೇನು ಸಂಬಳ ಕೊಡಬೇಕು ?"

" ಸಾವಿರದ ಇನ್ನೂರು ರೂಪಾಯಿಗಳನ್ನು ಕೊಡಬೇಕು. ಮೂರು ಸಾವಿರ ರೂಪಾಯಿಗಳನ್ನು ಅಡ್ವಾನ್ಸ್ ಕೊಡಬೇಕು "

ವಿಜಯನು–" ಇದೇನು ಗೋಡ್ಬೋಲೆ. ನಿಮಗಿದ್ದ ಸಂಬಳದ ನಾಲ್ಕರಷ್ಟು ಸಂಬಳ ಕೇಳುತ್ತೀರಿ ?" ಎಂದು ಆಶ್ಚರ್ಯವನ್ನು ವ್ಯಕ್ತಪಡಿಸಿದನು.

ಗೋಡ್ಬೋಲೆಯು–" ನಿಮ್ಮ ಚಿತ್ರವು ಯಶಸ್ವಿಯಾಗುವುದೆಂಬ ನಂಬಿಕೆಯಿದೆ. ನನ್ನಲ್ಲಿ ನೀವು ಪೂರ್ಣ ಭರವಸೆಯಿಟ್ಟರೆ ನನ್ನ ಸಾಮರ್ಥ್ಯವನ್ನು ತೋರಿಸುತ್ತೇನೆ. ಆಗ ನನಗೆ ಕೊಡುವ ಸಂಬಳವು ಏನೂ ಹೆಚ್ಚಲ್ಲವೆಂದು ನಿಮಗೇ ತಿಳಿಯುತ್ತದೆ. ಅಷ್ಟೇ ಅಲ್ಲ. ಮೂವರು ಅಸಿಸ್ಟೆಂಟ್‌ಗಳನ್ನು ಕೊಡಬೇಕು. ಅವರನ್ನೆಲ್ಲಾ ನೇಮಿಸಿಕೊಳ್ಳುವ ಅಧಿಕಾರವು ನನಗೇ ಇರಬೇಕು '' ಎಂದನು.

" ಒಳ್ಳೆಯದು. ಇತರ ಸ್ಟುಡಿಯೋಗಳಲ್ಲಿ ಇದೇ ಸಂಬಳವಿದ್ದರೆ ನಿಮಗೂ ಅಷ್ಟೇ ಕೊಡಬೇಕಾಗುತ್ತದೆ ''

" ಅಷ್ಟೇಯೇಕೆ ? ತಿಂಗಳಿಗೆ ಮೂರು ಸಾವಿರ ಸಂಬಳ ಕೊಡುವ ಸ್ಟುಡಿಯೋಗಳು ಸಹ ಈ ಊರಿನಲ್ಲಿದೆ "

" ಒಳ್ಳೆಯದು. ಒಂದೆರಡು ದಿನಗಳು ಆಲೋಚನೆ ಮಾಡಿ, ನಿಮಗೆ ಉತ್ತರ ಹೇಳಬೇಕಾಗುತ್ತದೆ "

ಅವರಿಬ್ಬರ ಮಾತೂ ಪೂರೈಸಿತು.

ಅನಂತರ ವಿಜಯನು “ ಗೋಡ್ಬೋಲೆಯವರೇ. ಮತ್ತೊಂದು ಮಾತನ್ನು ಕೇಳಬೇಕೆಂದಿದ್ದೇನೆ. ನಿಮಗೆ ಚೆನ್ನಾಗಿ ತಿಳಿದಿರುವಂತೆ ಯಾರಾದರೂ ಒಬ್ಬರು ಡೈರೆಕ್ಟರಿದ್ದಾರೆಯೋ ?” ಎಂದನು.

ಗೋಡ್ಬೋಲೆಯು “ ಇದೇನು ಸ್ವಾಮಿ. ಹೀಗೆ ಕೇಳುತ್ತೀರಿ ? ಈ ಚಿತ್ರಕ್ಕೆ ಶಾಂತಾರಾಂರವರು ಡೈರೆಕ್ಟರೆಂದು ಈ ಮುಂಬೈನಲ್ಲೆಲ್ಲಾ ಪ್ರಸಿದ್ಧವಾಗಿದೆ ” ಎಂದನು.

“ ಮೊದಲು ಹಾಗೆಯೇ ಮಾತು ನಡೆದಿತ್ತು. ಈಗ ಬದಲಾಯಿಸಿದ್ದೇವೆ. ನಿಮಗೆ ಯಾರಾದರೂ ತಿಳಿದಿದ್ದರೆ ಕರೆದುಕೊಂಡು ಬನ್ನಿ ’’

“ ಸ್ವಾಮಿ. ನಾನೊಂದು ಮಾತು ಹೇಳುತ್ತೇನೆ, ಕೇಳಿರಿ. ಈ ಪಟ್ಟಣದಲ್ಲಿ ನೂರಾರು ಮಂದಿ ಡೈರೆಕ್ಟರುಗಳೆಂದು ಹೇಳಿಕೊಂಡು ತಿರುಗುವವರಿದ್ದಾರೆ. ನಾಟಕದಲ್ಲಿಯೋ ಸಿನಿಮಾದಲ್ಲಿಯೋ ನಟರಾಗಿದ್ದು ಕೊಂಚ ಚಮತ್ಕಾರ ಬಲ್ಲವರೆಲ್ಲಾ ಡೈರೆಕ್ಟರೆನಿಸಿಕೊಂಡು ಬಿಟ್ಟಿದ್ದಾರೆ. ಅವರೆಲ್ಲಾ ನನಗೆ ಒಪ್ಪುವುದಿಲ್ಲ. ನೋಡಿ, ಪುಣೆಯ ಕೇಸರಿ ಆಫೀಸಿನಲ್ಲಿ ಟೀಕಾರಾಂ ಎಂಬುವರು ಒಬ್ಬನಿದ್ದಾನೆ. ಅವನು ಪ್ರಚಂಡ ಮನುಷ್ಯ. ಬಹಳ ಮಾತನಾಡುತ್ತಾನೆ. ಈ ಊರಿನ ಫಿಲಿಂ ಪತ್ರಿಕೆಗಳಲ್ಲಿ ಬರುವ ಕಟುತರವಾದ ಟೀಕೆಗಳೆಲ್ಲಾ ಅವನದೇ. ಅಬ್ಬಾಸ್‌ರವರು ಕೂಡ ಅವನ ಟೀಕೆಗಳಿಗೆ ತಲೆದೂಗಿ ಬಿಡುತ್ತಾರೆ. ಅವನನ್ನು ಕರೆತರುತ್ತೇನೆ. ನೀವು ಮಾತನಾಡಿ ಅವನನ್ನೇಕೆ ಉಪಯೋಗಿಸಿಕೊಳ್ಳಬಾರದು ?”

“ ಅವರನ್ನು ಕರೆತನ್ನಿ. ಮಾತನಾಡೋಣ ”

“ ಆದರೆ ಒಂದು ಮಾತು. ನಾನೇನೋ ಅವರನ್ನು ಕರೆತರುತ್ತೇನೆ. ಎಲ್ಲ ಜವಾಬ್ದಾರಿಯೂ ನಿಮ್ಮದು. ಆತನು ಹುಚ್ಚು ಮನುಷ್ಯ. ಮಾತಿನಲ್ಲಿ ಕೆಲಸಕಾರ್ಯಗಳಲ್ಲಿ ಏನು ವ್ಯತ್ಯಾಸ ಬಂದರೂ ನನ್ನ ಮೇಲೆ ಹೊರಿಸಬಾರದು. ನನ್ನನ್ನು ಆಕ್ಷೇಪಿಸಬಾರದು ”

ವಿಜಯನು “ ಒಳ್ಳೆಯದು. ನೀವು ಅವರನ್ನು ಕರೆತನ್ನಿ. ನಾನೂ, ಭಟ್ಟರೂ ಅವರೊಡನೆ ಮಾತನಾಡಿ ನೋಡುತ್ತೇವೆ ” ಎಂದನು.

ಗೋಡ್ಬೋಲೆಯು ಹೊರಟು ಹೋದನು.

ಮಾರನೆಯ ದಿನ ಮಧ್ಯಾಹ್ನ ಭಟ್ಟನೂ ವಿಜಯನೂ ಮಾತನಾಡುತ್ತಾ ಕುಳಿತಿದ್ದಾಗ ಆಳು ಬಂದು ಒಂದು ವಿಜಿಟಿಂಗ್ ಕಾರ್ಡನ್ನು ತಂದು ಕೊಟ್ಟನು.

ವಿಜಯನು ಅದನ್ನು ಕೈಗೆ ತೆಗೆದುಕೊಂಡು ನೋಡಿ "ಓಹೋ! ನಿನ್ನೆ ನಾನು ಪ್ರಸ್ತಾಪ ಮಾಡಿದ ಟೀಕಾರಾಂ ಬಂದಿದ್ದಾನೆ. ಕೆಳಗೆ ಆಫೀಸಿಗೆ ಹೋಗಿ ಮಾತನಾಡೋಣ ಬರುತ್ತೀಯಾ ?" ಎಂದನು.

ಭಟ್ಟನು ಆ ಕಾರ್ಡನ್ನು ಕೈಗೆ ತೆಗೆದುಕೊಂಡು ನೋಡಿದನು. "ಓಹೋ! ಇವನು ಎಂ. ಎ. ಪಾಸ್ ಬೇರೇಮಾಡಿದ್ದಾನೆಯೋ?" ಎಂದನು.

ವಿಜಯನು "ಇರಬಹುದು. ಇಲ್ಲದೇ ಕಾರ್ಡಿನಲ್ಲಿ ಹಾಕಿಕೊಳ್ಳುತ್ತಾನೆಯೇ ?" ಎಂದನು.

ಇಬ್ಬರೂ ಕೆಳಗಿಳಿದು ಬಂದು ಟೀಕಾರಾಂನನ್ನು ನೋಡಿದರು. ಸುಮಾರು ೩೫ ವರ್ಷ ವಯಸ್ಸಿರಬಹುದು. ಸಣ್ಣ ಆಕಾರ. ಮಿಲ್ ಪಂಚೆಯುನ್ನುಟ್ಟು, ಖಾದಿ ಜುಬ್ಬಾ ಧರಿಸಿದ್ದಾನೆ. ಕೈಯ್ಯಲ್ಲೊಂದು ಚರ್ಮದ ಬ್ಯಾಗ್ ಇಟ್ಟುಕೊಂಡಿದ್ದಾನೆ. ಎದ್ದು ನಿಂತು ನಗು ಮೊಗದಿಂದ "ನಮಸ್ತೆ" ಎಂದು ಹೇಳಿದನು.

ವಿಜಯನು "ಕುಳಿತು ಕೊಳ್ಳಿರಿ" ಎಂದು ಹೇಳಿ ಅವನ ಎದುರಿಗೆ ತಾನು ಕುಳಿತು ಕೊಂಡನು. ಭಟ್ಟನು ನಿಂತೇ ಇದ್ದನು.

ವಿಜಯನು "ನಮ್ಮ ಗೋಡ್ಬೋಲೆಯುವರು ನಿಮ್ಮ ವಿಷಯ ಹೇಳಿದ್ದಾರೆ. ನಿಮ್ಮೊಡನೆ, ಮಾತನಾಡಲು ನಮಗೆ ಬಹಳ ಆಸಕ್ತಿ ಇದೆ" ಎಂದನು.

ಟೀಕಾರಾಂ "ನನಗೂ ತಮ್ಮನ್ನು ನೋಡುವ ಕುತೂಹಲವಿದ್ದಿತು. ನವಭಾರತ ಸ್ಟುಡಿಯೋ ತೆಗೆದುಕೊಂಡಿದ್ದೀರಂತೆ. ಶಿವ–ಪಾರ್ವತಿ ಚಿತ್ರವು ತಯಾರಾಗುವುದಂತೆ. ನನಗೂ ಏನಾದರೂ ಅವಕಾಶ ಸಿಕ್ಕುವುದೋ ಎಂಬ ಕುತೂಹಲ" ಎಂದನು.

"ನೀವು ಡೈರೆಕ್ಟರೋ ?"

"ನಾನು ಜರ್ನಲಿಸ್ಟ್ ಎನ್ನಬಹುದು. ಸದ್ಯಕ್ಕೆ ಅಷ್ಟೆ. ನೀವು

ಅವಕಾಶ ಕೊಟ್ಟರೆ, ನಿಮ್ಮ ಚಿತ್ರವು ಯಶಸ್ವಿಯಾದರೆ ಆಗ ಡೈರೆಕ್ಟರೆಂದು ಕರೆಯಬಹುದು. ಈಗ ಟೀಕಾರಾಂ ಅಸಾಮರ್ಥ್ಯ."

"ನಿಮ್ಮ ಅನುಭವಗಳೇನು ?"

ಟೀಕಾರಾಂ ನಕ್ಕು "ನನ್ನ ಅನುಭವಗಳು ಎಲ್ಲದರಲ್ಲಿಯೂ ಅತೃಪ್ತಿ. ಪೂರ್ಣ ಅವಕಾಶ ದೊರೆತರೆ ಒಂದು ಚಿತ್ರವನ್ನು ಡೈರೆಕ್ಟ್ ಮಾಡಿ ತೋರಿಸಿ ಬಿಡಬೇಕೆಂಬ ತೀವ್ರಾಸಕ್ತಿ. ಇದೇ ನನ್ನ ಅನುಭವಗಳು" ಎಂದನು.

"ನೀವು ಕೇಸರಿ ಆಫೀಸಿನಲ್ಲಿ ಇದ್ದೀರೆಂದು ಕೇಳಿದ್ದೇನೆ. ಆ ಕೇಸರಿಯಲ್ಲಿ ಆಸಕ್ತಿ ಇಲ್ಲವೋ ನಿಮಗೆ"

"ಆಸಕ್ತಿ ಇಲ್ಲದಿದ್ದರೆ ಅಲ್ಲಿಗೇಕೆ ಹೋಗುತ್ತಿದ್ದೆ ? ಪೂರ್ಣ ಆಸಕ್ತಿ ಇದೆ. ಪೂರ್ವ ಕಾಲದಲ್ಲಿ ಕ್ಷತ್ರಿಯರು ಬಿಲ್ಲು ವಿದ್ಯೆಯನ್ನು ಎಷ್ಟು ಪ್ರೀತಿಸುತ್ತಿದ್ದರೋ ಈ ಕಾಲದ ಬ್ರಾಹ್ಮಣರು ಪತ್ರಿಕೋದ್ಯೋಗವನ್ನು ಅಷ್ಟು ಪ್ರೀತಿಸುತ್ತಾರೆ. "ವಾಚಿ ವೀರ್ಯಂತು ವಿಪ್ರಾಣಾಂ" ಎಂಬ ನಾಣ್ಣುಡಿಯನ್ನು ಕೇಳಿಲ್ಲವೇ, ನೀವು ? ಕೇಸರಿಯ ಆಫೀಸಿನಲ್ಲಿರುವುದು ಮಹಾರಾಷ್ಟ್ರದಲ್ಲಿ ಒಂದು ಹೆಮ್ಮೆ"

"ಕೇಸರಿ ಕಾರ್ಯಾಲಯವನ್ನು ಬಿಟ್ಟು ಬಂದರೆ ಅವರೇನು ತಪ್ಪು ತಿಳಿದುಕೊಳ್ಳುವುದಿಲ್ಲವೇ ?"

"ಇಲ್ಲ. ಎಂದಿಗೂ ತಪ್ಪು ತಿಳಿದುಕೊಳ್ಳುವುದಿಲ್ಲ. ನನ್ನ ಡೈರೆಕ್ಷನ್‌ನಲ್ಲಿ ಈ ಚಿತ್ರವು ಯಶಸ್ವಿಯಾದರೆ ಕೇಳ್ಕರ್‌ರವರು ಹೆಮ್ಮೆ ಪಡುತ್ತಾರೆ. ಕೇಳ್ಕರ್‌ರವರ ವಿಷಯ ನೀವರಿಯಿರಿ. ದೊಡ್ಡ ವಿದ್ವಾಂಸರು. ಭಾಷಾ ಕೋವಿದರು. ರಾಜನೀತಿಯಲ್ಲಿಯೂ ಪ್ರಚಂಡರು. ಅವರ ವಿದ್ವತ್ ಸರ್ವತೋಮುಖವಾದುದು. ಚಿತ್ರಗಳ ವಿಷಯದಲ್ಲಿಯೂ ಅವರದೊಂದು ಆದರ್ಶ ಉಂಟು"

"ಹಾಗಾದರೆ ನೀವು ಕೇಸರಿ ಕಾರ್ಯಾಲಯವನ್ನು ಬಿಟ್ಟು ಬರಲು ಸಿದ್ಧರಾಗಿದ್ದೀರಾ ?"

"ನನ್ನ ಸುಖ ದುಃಖ ನಿಮಗೇಕೆ ? ಕೇಸರಿ ಕಾರ್ಯಾಲಯದ ವಿಷಯ ನಿಮಗೇನು ಗೊತ್ತು ? ತಂದೆ ಮಕ್ಕಳು ಬಿಡುವುದೆಂದರೇನು,

ಕಟ್ಟಿಕೊಳ್ಳುವುದೆಂದರೇನು ? ನಾನು ಯಾವಾಗ ಹೋದರೂ ಕೇಸರಿ ಕಚೇರಿಯಲ್ಲಿ ನನಗೊಂದು ಮೇಜು ಸಿದ್ಧವಾಗಿರುತ್ತದೆ "

" ಟೀಕಾರಾಂ, ಅದೆಲ್ಲಾ ಹಾಗಿರಲಿ. ನೀವು ನಮ್ಮ ಚಿತ್ರದಲ್ಲಿ ಡೈರೆಕ್ಟರಾಗುತ್ತೀರಿ. ಅಷ್ಟೆ ನಮಗೆ ಮುಖ್ಯ. ನಿಮಗೆಷ್ಟು ಸಂಬಳ ಕೊಡಬೇಕು ?"

" ನಾನು ಮೊದಲೇ ಹೇಳಿದೆ. ನೀವೇಕೆ ಅರ್ಥ ಮಾಡಿಕೊಳ್ಳಲಿಲ್ಲವೋ ನಾನರಿಯೆ. ನಿಮ್ಮ ಕಂಪನಿಯಲ್ಲಿ ನಾನು ಬಂದು ಸೇರುತ್ತೇನೆ. ಡೈರೆಕ್ಷನ್ ನಡೆಸಲು ಪೂರ್ಣ ಅವಕಾಶವಿತ್ತರೆ ನನ್ನ ಶಕ್ತಿ ಮೀರಿ ಸಾಹಸ ಮಾಡುತ್ತೇನೆ. ಯಶಸ್ವಿಯಾದರೆ ನಾನು ಕೃತಕೃತ್ಯನಾದೆನೆಂದು ಸಂತೋಷಪಟ್ಟುಕೊಳ್ಳುತ್ತೇನೆ. ಸಂಬಳದ ವಿಚಾರ. ನನಗೆ ನನ್ನ ಖರ್ಚಿಗೆ ತಿಂಗಳಿಗೆ ಒಂದು ಸಾವಿರ ರೂಪಾಯಿ ಕೊಡಿರಿ. ಚಿತ್ರವು ಪೂರೈಸಿದರೆ ಯಶಸ್ವಿಯಾದರೆ ಐವತ್ತು ಸಹಸ್ರ ರೂಪಾಯಿಗಳನ್ನು ಕೊಡಬೇಕು "

ವಿಜಯನು " ಸ್ವಲ್ಪ ಹೊತ್ತು ಯೋಚನೆ ಮಾಡಿ ನಿಮ್ಮ ಕಾರ್ಯವು ಆರಂಭದಲ್ಲಿಯೇ ಸಮರ್ಪಕವಾಗದಿದ್ದರೆ ?" ಎಂದನು.

ಟೀಕಾರಾಂ ನಕ್ಕು " ನನಗೂ ಆ ಸಂದೇಹವಿದ್ದೇ ಇದೆ. ನನ್ನ ಕೆಲಸವು ಯಶಸ್ವಿಯಲ್ಲವೆಂದು ತೋರಿದರೆ ಒಂದು ಕ್ಷಣ ನಾನು ನಿಮ್ಮ ಕಂಪನಿಯಲ್ಲಿ ಇರುವುದಿಲ್ಲ. ಆಗಲೂ ನನ್ನ ಪ್ರಯತ್ನವು ವಿಫಲವಾಯಿತೆಂದು ಸಂತೋಷದಿಂದ ಹೊರಟು ಹೋಗುತ್ತೇನೆ. ನನ್ನಿಂದ ನಿಮಗೆ ಒಂದು ಪೈ ನಷ್ಟವಾಗಲು ಬಿಡುವುದಿಲ್ಲ " ಎಂದನು.

" ಅದೆಲ್ಲಾ ಸರಿಯಾಗಿದೆ. ಆದರೆ ಕಂಪನಿಯ ಸಂಪ್ರದಾಯದಂತೆ ಎಲ್ಲವೂ ನಡೆಯಬೇಕು. ನೀವು ಅಗ್ರಿಮೆಂಟಿಗೆ ರುಜು ಮಾಡಬೇಕಾಗುತ್ತದೆ "

" ಮಿಸ್ಟರ್ ಭಟ್. ನಾನು ಯಾವ ಅಗ್ರಿಮೆಂಟಿಗೆ ಬೇಕಾದರೂ ರುಜು ಮಾಡುತ್ತೇನೆ. ಅದರಿಂದ ನಿಮಗೂ ಫಲವಿಲ್ಲ. ನನಗೂ ಫಲವಿಲ್ಲ. ನಿಮಗೆ ಬೇಡವಾದರೂ ನಾನು ಹೊರಟು ಹೋಗಬೇಕು. ನನಗೆ ಬೇಡವಾದರೂ ನಾನು ಹೊರಟು ಹೋಗಲೇಬೇಕು. ಅಗ್ರಿಮೆಂಟ್ ಏಕೆ ಮಾಡಿಸುತ್ತಾರೆಂಬುದನ್ನು ನಾನು ಬಲ್ಲೆ. ಇದೇ ವೃತ್ತಿಯನ್ನು ಅವಲಂಬಿಸಿದವರು ನಿಮ್ಮಿಂದ ಹಣ ವಸೂಲು ಮಾಡಲು ದಾರಿಯನ್ನು ಕಲ್ಪಿಸಿಕೊ

ಳ್ಳುವುದಕ್ಕೆ ಅಗ್ರಿಮೆಂಟ್ ಮಾಡುತ್ತಾರೆ. ನಿಮ್ಮ ಇಷ್ಟದಂತೆ ನಾನೂ ಅಗ್ರಿಮೆಂಟ್ ಮಾಡಿಕೊಳ್ಳುತ್ತೇನೆ. ಆದರೆ ಅದೆಲ್ಲಾ ಮುಖ್ಯವಲ್ಲ. ನೀವು ಒಂದು ದಿನ ನನ್ನೊಡನೆ ಪುಣೆಗೆ ಬನ್ನಿರಿ. ನಮ್ಮ ಕೇಶ್ಕರ್‌ರವರ ಮುಂದೆ ಮಾತನಾಡಿ ಬಿಡೋಣ. ಅದಕ್ಕಿಂತಲೂ ದೊಡ್ಡ ಅಗ್ರಿಮೆಂಟ್ ಯಾವುದೂ ಇಲ್ಲ "

ವಿಜಯನು " ಟೀಕಾರಾಂ. ನಾನು ಪ್ರೊಪ್ರೈಟರ್ ಭಟ್ ಅಲ್ಲ " ಎಂದು ಭಟ್ಟನ ಕಡೆಗೆ ಕಣ್ಣು ತಿರುಗಿಸಿ " ಅವರು ಭಟ್. ನನ್ನ ಹೆಸರು ವಿಜಯೇಂದ್ರ. ನಾನು ಈ ಕಥೆಯನ್ನು ಬರೆದಿರುವ ಬರೆಹಗಾರ. ನಾನೂ ನೀವೂ ಒಂದೇ ಜೋಡಿ " ಎಂದನು.

ಟೀಕಾರಾಂನು ಭಟ್ಟನ ಕಡೆಗೆ ಕೈ ಮುಗಿದು " ಕ್ಷಮಿಸಿರಿ. ನಾನು ಇವರನ್ನೇ ಭಟ್ಟರೆಂದು ತಿಳಿದುಕೊಂಡಿದ್ದ " ಎಂದನು.

ಭಟ್ಟನು ನಗುತ್ತಾ " ಅದರಲ್ಲೇನೂ ವ್ಯತ್ಯಾಸವಿಲ್ಲ. ನನಗಿರುವ ಸರ್ವಾಧಿಕಾರವೂ ಈ ವಿಜಯೇಂದ್ರರಾಯರಿಗಿದೆ. ಹೆಸರುಗಳು ಮಾತ್ರ ಬೇರೆ ಬೇರೆ " ಎಂದು ಹೇಳಿದನು.

ಭಟ್ಟನಿಗೆ ಆ ಟೀಕಾರಾಮನೊಡನೆ ಮಾತನಾಡುವ ಕುತೂಹಲವು ಬಹಳವಾಗಿದ್ದಿತು.

ಭಟ್ಟನು " ಟೀಕಾರಾಂರವರೇ, ನಾನೊಂದು ಪ್ರಶ್ನೆಯನ್ನು ಕೇಳಲೇ ? ಎಂದನು.

ಟೀಕಾರಾಂ " ಕೇಳಿರಿ. ಅದಕ್ಕೇನು ಕಷ್ಟ ?" ಎಂದನು.

" ನಿಮಗೇಕೆ ಈ ಸಿನೀಮಾ ಪ್ರಪಂಚದಲ್ಲಿ ಇಷ್ಟು ಆಸಕ್ತಿ ? ನಿಮ್ಮ ಖಾಯಂ ಉದ್ಯೋಗವನ್ನು ಬಿಟ್ಟು ಈ ಪ್ರಪಂಚಕ್ಕೆ ಬರುತ್ತಿದ್ದೀರಿ. ಇದರ ಅರ್ಥವೇನು ?"

" ಭಟ್. ನಿಮ್ಮ ಪ್ರಶ್ನೆಯು ಉತ್ತರ ಕೊಡಲು ಕಠಿಣವಾದು ದೇನೂ ಅಲ್ಲ. ನಮ್ಮ ಭಾರತದ ಚಿತ್ರಪಟಗಳನ್ನು ನಮ್ಮವರೇ ಅವಹೇಳನ ಮಾಡುತ್ತಾರೆ. ನನಗೆ ನಮ್ಮ ದೇಶದ ಕೌಶಲ್ಯವು ಅಷ್ಟು ಕಡಮೆಯಾದ ದ್ದೆಂಬ ಭಾವನೆ ಇಲ್ಲ. ಸಹಾಯ ಸಂಪತ್ತಿಗಳು ಸಂಪೂರ್ಣವಾಗಿದ್ದರೆ,

ನಾವು ಎಲ್ಲವನ್ನೂ ಮಾಡಿ ತೋರಿಸಬಲ್ಲೆವೆಂಬ ಧೈರ್ಯವು ನನಗಿದೆ. ಅದಕ್ಕಾಗಿ ಇವರಲ್ಲಿಯೂ ಒಂದು ಕೈ ನೋಡೋಣವೆಂಬ ಆಶೆಯಿದೆ. ಅಷ್ಟೆ''

"ನೀವು ಪರದೇಶಗಳ ಸ್ಟುಡಿಯೋಗಳಲ್ಲಿ ಚಿತ್ರಪಟ ತಯಾರಾಗುವ ರೀತಿಯನ್ನು ನೋಡಿದ್ದೀರೊ ?"

"ಚೆನ್ನಾಗಿ ನೋಡಿದ್ದೇನೆ. ನಾಲ್ಕು ವರ್ಷಗಳು ಅಲೆದಾಡಿದ್ದೇನೆ. ನಾನು ಕಾಲೇಜಿನ ವಿದ್ಯಾರ್ಥಿಯಾಗಿರುವಾಗಲೇ ಸಣ್ಣದೊಂದು ಕ್ರಾಂತಿಕಾರರ ಗುಂಪಿಗೆ ಸೇರಿದೆ. ಇಲ್ಲಿಂದ ಪರೀಕ್ಷೆಯಲ್ಲಿ ತೇರ್ಗಡೆಯಾಗುತ್ತಲೇ ಫ್ರಾನ್ಸಿಗೆ ಹೋದೆ. ಫ್ರಾನ್ಸಿನಲ್ಲಿ ನಮ್ಮ ದೇಶದವರು ಅನೇಕರಿದ್ದಾರೆ. ಅವರೇನೋ ಭಾರತದ ಉದ್ಧಾರ ಮಾಡುತ್ತಾರೆಂಬು ನನಗೆ ಭಾವನೆ ಇತ್ತು. ಅಲ್ಲಿ ನನಗೆ ಒಂದು ಹೊತ್ತಿನ ಊಟ ಸಂಪಾದಿಸುವುದು ಕಷ್ಟವಾಗುತ್ತಿದ್ದಿತು. ನಮಗೇನೂ ಕಿಮ್ಮತ್ತಿಲ್ಲವೆಂದು ದೃಢವಾಯಿತು. ಆ ಸಮಯದಲ್ಲಿ ಸುಭಾಷ್ ಬೋಸರು ಬಂದಿದ್ದರು. ಎರಡು ದಿನ ಅವರ ಜೊತೆಯಲ್ಲಿ ಅಲೆದೆ. ಅವರಿಗೆ ನನ್ನಿಂದ ಏನೂ ಉಪಯೋಗವಿಲ್ಲವೆಂದು ನನಗೇ ತೋರಿತು. ಅಲ್ಲಿ ಇರುವುದಕ್ಕೆಡೆಯಿಲ್ಲದೇ ಇಂಗ್ಲೆಂಡಿಗೆ ಹೋದೆ. ಲಂಡನ್ನಿನಲ್ಲಿ ಅಲೆಯುತ್ತಿದ್ದೆ. ಕೈಲಿ ದುಡ್ಡಿರಲಿಲ್ಲ. ವಿದ್ಯಾರ್ಥಿಗಳಿಂದ ಹತ್ತು ಇಪ್ಪತ್ತು ಪೌಂಡುಗಳನ್ನು ಕಸಿದುಕೊಂಡು ಕಾಲಯಾಪನೆ ಮಾಡುತ್ತಿದ್ದೆ. ಅದೂ ಸರಿಬೀಳಲಿಲ್ಲ. ಸ್ವಲ್ಪ ದುಡ್ಡು ಶೇಖರಿಸಿಕೊಂಡು ಅಮೇರಿಕಕ್ಕೆ ಹೋದೆ. ಅಲ್ಲಿ ಈ ಚಿತ್ರಪಟಗಳ ಸಹವಾಸ ಹತ್ತಿತು. ಅಲ್ಲಿ ನನಗೆ ಜೀವನಕ್ಕೆ ಅಷ್ಟು ಕಷ್ಟವಾಗುತ್ತಿರಲಿಲ್ಲ. ಸ್ವಲ್ಪ ದುಡ್ಡು ಬರುತ್ತಿತ್ತು. ಅಲ್ಲಿ ಚಿತ್ರಪಟಗಳ ನಿರ್ಮಾಣ, ದಿಗ್ದರ್ಶನಗಳು ಹೇಗೆ ನಡೆಯುತ್ತವೆಂದು ನೋಡಿದೆ. ನಾನು ಮನಶ್ಶಾಸ್ತ್ರದ ವ್ಯಾಸಂಗ ಮಾಡಿದ್ದುದರಿಂದ ನನ್ನ ಬುದ್ಧಿಗೆ ಅಲ್ಲಿ ಕೊಂಚ ಬೆಲೆ ಸಿಕ್ಕಿತು. ಆದರೆ ತೃಪ್ತಿಯಿರಲಿಲ್ಲ. ಅಲ್ಲಿ ನಾನೇನೂ ಮಾಡುವುದಕ್ಕೆ ಸಾಧ್ಯವಿರಲಿಲ್ಲ. ನಮ್ಮ ದೇಶಕ್ಕೆ ಹಿಂತಿರುಗಿದೆ.

"ಆಗ ತಾನೇ ನಮ್ಮ ದೇಶದಲ್ಲಿ ಸತ್ಯಾಗ್ರಹದ ಸಮರ ಆರಂಭವಾಗಿತ್ತು. ಆ ಚಳುವಳಿಯಲ್ಲಿ ಸೇರಿ ದೇಶ ಸೇವೆ ಮಾಡಬೇಕೆನ್ನಿಸಿತು. ಹಗಲಿರುಳೂ ಅದೇ ಹಂಬಲವಿತ್ತು. ಆದರೆ–ಗಾಂಧಿಯವರ ಸತ್ಯಾಗ್ರಹವು ಸಾರ್ಥಕವಾ

ಗುವುದಿಲ್ಲವೆಂದು ನನಗೆನಿಸಿತು. ಕೇಸರೀ ಕಚೇರಿಯಲ್ಲಿ ಹೋಗಿ ಕೆಲಸಕ್ಕೆ ಸೇರಿದೆ. ನಮ್ಮ ಕಚೇರಿಯಲ್ಲಿ ಎಲ್ಲರೂ ನನ್ನನ್ನು ಪ್ರೀತಿ ಮಾಡುತ್ತಾರೆ. ಆದರೆ ನನಗೆ ಈ ಸಿನಿಮಾ ಹುಚ್ಚು ಬಹಳವಾಗಿದೆ. ಈ ಊರಿನಲ್ಲಿ ಎಷ್ಟೋ ಬಾರಿ ಪ್ರಯತ್ನ ಪಟ್ಟೆ. ಅವಕಾಶವು ದೊರೆಯಲಿಲ್ಲ. ಡೈರೆಕ್ಟರ್ ಎಂದರೆ ಒಬ್ಬಿಬ್ಬರು ನಟಿಯರನ್ನು ಕೈಯಲ್ಲಿಟ್ಟುಕೊಂಡಿರಬೇಕು. ಅಥವಾ ಮಾಲೀಕರ ಪ್ರಬಲವಾದ ಗೆಳೆತನವಿರಬೇಕು. ಇಲ್ಲವೇ ಮಾಲೀಕರನ್ನು ಪ್ರೇರಿಸಿ ಹಿಡಿದು ತಂದು ದುಡ್ಡು ಹಾಕಿಸಿ ನಟನಟಿಯರನ್ನು ಕಟ್ಟಿ ಓಡಾಡಬೇಕು. ಅದಕ್ಕೆಲ್ಲಾ ನನಗೆ ಅವಕಾಶವಿರಲಿಲ್ಲ. ಆದ್ದರಿಂದ ನಾನು ಡೈರೆಕ್ಟರನಾಗಲಿಲ್ಲ "

ವಿಜಯನು " ನಿಮ್ಮ ಕಥೆಯು ಬಲು ದೊಡ್ಡದಾಗಿದೆ. ನಾವೂ ಪ್ರಯತ್ನ ಪಟ್ಟು ನೋಡೋಣ. ನಮ್ಮದೆಲ್ಲಾ ಹೊಸ ಉದ್ಯಮ. ಗೆದ್ದರೆ ಎಲ್ಲರೂ ಗೆಲ್ಲುತ್ತೇವೆ. ಬಿದ್ದರೆ ಎಲ್ಲರೂ ಚೆದರಿ ಹೋಗುತ್ತೇವೆ. ಅಷ್ಟೇ, ಮಿಸ್ಟರ್ ಟೀಕಾರಾಂ. ಗೋಡ್‌ಬೋಲೆಯವರು ನಿಮ್ಮ ಸಾಮರ್ಥ್ಯದಲ್ಲಿ ಬಹಳ ಭರವಸೆ ಇಟ್ಟಿದ್ದಾರೆ. ನಮಗೂ ನಿಮ್ಮ ಮೇಲೆ ಪ್ರೀತಿಯು ಹುಟ್ಟಿದೆ. ನೀವು ಕೇಸರಿಯ ಆಫೀಸಿನಿಂದ ಅಪ್ಪಣೆ ತೆಗೆದುಕೊಂಡು ಬಂದು ಬಿಡಿರಿ. ಮೊದಲನೆಯ ತಾರೀಖಿನ ದಿವಸವೇ ನಿಮ್ಮ ಅಗ್ರೀಮೆಂಟ್ ಆಗಲೀ " ಎಂದು ಹೇಳಿದನು.

ಅಷ್ಟು ಹೊತ್ತಿಗೆ ಪರಿಚಾರಕನು ಮೂವರಿಗೂ ಚಹ ತಂದು ಕೊಟ್ಟನು. ಚಹ ತೆಗೆದುಕೊಂಡು ಭಟ್ಟನಿಗೂ ವಿಜಯನಿಗೂ ವಂದಿಸಿ ಟೀಕಾರಾಮನು ಹೊರಟು ಹೋದನು.

ವಿಜಯನು ಒಂದೊಂದಾಗಿ ಎಲ್ಲ ಸಿದ್ಧತೆಗಳನ್ನೂ ಮಾಡುತ್ತಿದ್ದನು. ಹಗಲಿರುಳೂ ಅವನಿಗೆ ಅದೇ ಕೆಲಸವಾಗುತ್ತಿತ್ತು. ಒಂದೊಂದು ದಿನ ರಾತ್ರಿ ವಿಜಯನು ಮನೆಗೆ ಬರುವ ಹೊತ್ತಿಗೆ ಹನ್ನೆರಡು ಗಂಟೆಗಳು ಹೊಡೆದು ಹೋಗಿರುತ್ತಿದ್ದವು. ಅವನಿಗೆ ಭಟ್ಟನೊಡನೆ ಮಾತನಾಡುವುದಕ್ಕೆ ಅವಕಾಶವಿರುತ್ತಿರಲಿಲ್ಲ.

ವಿಜಯನು ಒಂದು ದಿನ ಪ್ರಾತಃಕಾಲ ಎದ್ದವನು ಎಲ್ಲಿಯೂ

ಹೋಗಿರಲಿಲ್ಲ. ಆ ದಿನ ಭೋಜನ ಮಾತು ಕಥೆಗಳು ಎಲ್ಲ ಸಮಯ ದಲ್ಲಿಯೂ ಅವರಿಬ್ಬರೂ ಅನೇಕ ವಿಷಯಗಳನ್ನು ಚರ್ಚಿಸುತ್ತಿದ್ದರು.

ಅಂದು ಮಧ್ಯಾಹ್ನ ಕಾಫೀ ಆದ ಮೇಲೆ ವಿಜಯನು "ಭಟ್ಟ! ಇಂದು ನೀನೂ ಲಕ್ಷ್ಮೀದೇವಿಯೂ ನನ್ನೊಡನೆ ಬರಬೇಕು" ಎಂದು ಹೇಳಿದನು.

ಭಟ್ಟನು ನಾನೇನೋ ತಯಾರಾಗಿದ್ದೇನೆ. ಲಕ್ಷ್ಮೀದೇವಿಯನ್ನು ಕೇಳಿ ನೋಡೋಣ" ಎಂದು ಹೇಳಿದನು.

ಭಟ್ಟನು ಲಕ್ಷ್ಮಿಯನ್ನು ಕರೆದು "ಲಕ್ಷ್ಮೀ! ನಾವಿಬ್ಬರೂ ಇಂದು ವಿಜಯನ ಜೊತೆಯಲ್ಲಿ ಹೋಗಬೇಕಂತೆ" ಎಂದು ಹೇಳಿದನು.

ಲಕ್ಷ್ಮಿಯು "ಎಲ್ಲಿಗೆ ಹೋಗಬೇಕು?" ಎಂದು ಕೇಳಿದಳು.

ಭಟ್ಟನು "ನವಭಾರತ ಸ್ಟುಡಿಯೋ ಮಂದಿರಕ್ಕೆ ಹೋಗಬೇಕಂತೆ" ಎಂದು ಹೇಳಿದನು.

ಲಕ್ಷ್ಮಿಯು "ನಾನೇಕೆ ಬರಬೇಕು? ಅಲ್ಲಿ ನಟನಟಿಯರಿರುತ್ತಾರೆ. ಸಂಗೀತಗಾರರಿರುತ್ತಾರೆ. ಅಲ್ಲಿ ನನಗೇನು ಕೆಲಸ?" ಎಂದಳು.

ಭಟ್ಟನು "ನೋಡು, ಲಕ್ಷ್ಮೀ. ಈ ವಿಜಯನು ರಚಿಸಿರುವ ಕಥೆಯು ಶಿವಪಾರ್ವತಿ ಎಂಬುದು ಗೊತ್ತಿದೆಯಷ್ಟೆ. ನಾವಿಬ್ಬರೂ ಶಿವ-ಪಾರ್ವತಿಯರ ರೂಪಕವನ್ನು ಧಾರಣೆ ಮಾಡಲು ಸ್ಟುಡಿಯೋಕ್ಕೆ ಹೋಗಬೇಕಂತೆ" ಎಂದನು.

ಲಕ್ಷ್ಮಿಯು ನಾಚಿಕೆಯಿಂದ ತಲೆ ಬಾಗಿದಳು.

ವಿಜಯನು "ಭಟ್ಟ! ಲಕ್ಷ್ಮಿ ಎಂದರೆ ಏನೆಂದು ತಿಳಿದಿದ್ದಿ? ಆಕೆಯು ಸಾಕ್ಷಾತ್ ಪಾರ್ವತಿಯೇ! ಚಿತ್ರಪಟದಲ್ಲಿ ಆಕೆಯ ಚಿತ್ರವು ಬಂದರೆ ಅಂಥಾ ಗಾಂಭೀರ್ಯ, ತೇಜಸ್ಸು ಮತ್ತಾವ ಚಿತ್ರದಲ್ಲಿ ತಾನೆ ಕಾಣಲು ಸಾಧ್ಯ? ಆದರೆ ಆ ಕಲ್ಪನೆಯು ತೀರಾ ಅಸಂಭವ. ಏಕೆಂದರೇ ನೀನು ಶಿವನ ಪಾತ್ರವನ್ನು ಅಭಿನಯಿಸಲಾರೆ" ಎಂದು ಹೇಳಿದನು.

"ಏಕೆ ವಿಜಯ. ಈ ಲಕ್ಷ್ಮೀದೇವಿಗೆ ನಾನು ಅನುರೂಪನಾದ ಪತಿಯಲ್ಲವೆಂದು ನಿನ್ನ ಭಾವನೆಯೇ?" ಎಂದನು.

ವಿಜಯನು, "ಭಟ್ಟ. ನಿಮ್ಮಿಬ್ಬರ ಅನುರೂಪಕ್ಕೆ ಕೊರತೆಯೇನೂ

ಇಲ್ಲ. ಆದರೆ ನಟನಾಗುವ ಮಾತು ಬೇರೆ. ನೀನು ಎಂದಿಗೂ ಲಕ್ಷ್ಮಿ ದೇವಿಗೆ ಅನುರೂಪನಾದ ನಟನಾಗಲಾರೆ " ಎಂದನು.

ಲಕ್ಷ್ಮಿಯು " ನೋಡಿ, ಕವಿರಾಜ ! ನೀವಿಬ್ಬರೂ ನನ್ನ ಮಾತನ್ನು ಎತ್ತಿ ಆಡುತ್ತಿರುವುದಾದರೆ ನಾನೆಲ್ಲಿಗೂ ಬರುವುದೇ ಇಲ್ಲ. ನಿಮಗೆ ಮುಖ ತೋರಿಸುವುದೂ ಇಲ್ಲ " ಎಂದು ಹೇಳಿದಳು.

ಭಟ್ಟನು " ಒಳ್ಳೆಯದಾಯಿತು. ಮದರಾಸಿನಲ್ಲಿ ಸ್ತ್ರೀ ಸ್ವಾತಂತ್ರ್ಯದ ಧ್ವಜವನ್ನು ಎತ್ತಿ ಹಿಡಿಯುತ್ತಿದ್ದ ಲಕ್ಷ್ಮಿದೇವಿಯು ಬೊಂಬಾಯಿಗೆ ಬಂದು ಘೋಷಾ ಪದ್ಧತಿಯನ್ನು ಸ್ವೀಕಾರ ಮಾಡಿದರೆ ನಾರೀ ಜಗತ್ತಿನಲ್ಲಿ ದೊಡ್ಡ ದೊಂದು ಪರಿವರ್ತನೆಯೇ ಆದಂತಾಯಿತು " ಎಂದು ಹೇಳಿದನು.

ಲಕ್ಷ್ಮಿಯು " ಏನೇನೋ ಮಾತನಾಡುತ್ತೀರಿ. ನೀವು ನನ್ನನ್ನು ನಟಿಯರಿಗೆ ಹೋಲಿಸಿದರೆ ನನಗೆ ನಾಚಿಕೆಯಾಗುತ್ತದೆ. ಅಪಮಾನ ವಾದಂತಾಗುತ್ತದೆ " ಎಂದಳು.

ಭಟ್ಟನು " ಲಕ್ಷ್ಮೀ. ನಟಿಯೆಂದರೆ ಏನೆಂದುಕೊಂಡಿದ್ದೀ ? ಅವಳಿಗೆ ಸ್ತ್ರೀ ಸಮಾನತ್ವವಿಲ್ಲವೇ ? ಮಾನ ಮನ್ನಣೆಗಳಿಲ್ಲವೇ ?" ಎಂದನು.

ಲಕ್ಷ್ಮಿಯು " ಎಲ್ಲವೂ ಉಂಟು. ಅವರಿಗೆ ರಂಗಸ್ಥಳದಲ್ಲಿ ಸ್ಥಾನ. ನಮಗೆ ಗೃಹದಲ್ಲಿ ಸ್ಥಾನ. ಅಷ್ಟೇ ವ್ಯತ್ಯಾಸ " ಎಂದು ಹೇಳಿದಳು.

ಭಟ್ಟನು " ಲಕ್ಷ್ಮೀ. ಮೊದಲಿನಿಂದಲೂ ಇದೇ ನನ್ನ ಹಣೆಯ ಬರಹ. ವಾದಕ್ಕೆ ಆರಂಭವಾದರೆ ನಿನಗೆ ಗೆಲವು, ನನಗೆ ಸೋಲು. ನಿನ್ನಲ್ಲಿ ಸೋಲುವುದೇ ನನಗೊಂದು ಆನಂದ. ನಡಿ, ಅಲಂಕರಿಸಿಕೊಂಡು ಹೊರಡು. ವಿಜಯನೊಡನೆ ಹೋಗಿ ಬರೋಣ. ಆ ಮೇಲೆ ನಟಿ-ಗೃಹಿಣಿ, ರಂಗಸ್ಥಳ-ಮನೆಗಳ ವಾದವನ್ನು ಮಾಡೋಣ " ಎಂದು ಹೇಳಿದನು.

ಲಕ್ಷ್ಮಿಯು ತನ್ನ ಕೋಣೆಗೆ ಹೊರಟು ಹೋದಳು.

ಲಕ್ಷ್ಮಿ, ಭಟ್ಟ ಮತ್ತು ವಿಜಯ ಮೂವರೂ ಸ್ಟುಡಿಯೋಕ್ಕೆ ಹೊರಟರು. ವಿಜಯನು ಒಂದು ಕಡೆಯಿಂದ ಸ್ಟುಡಿಯೋ ಎಲ್ಲವನ್ನೂ ತೋರಿಸುತ್ತ ಬಂದನು. ಅಲಂಕರಿಸಿಕೊಳ್ಳುವ ಕೋಣೆಗಳು, ಆ ಕೋಣೆ ಗಳ ಅಚ್ಚುಕಟ್ಟು, ವರ್ಣಸಾಮಗ್ರಿಗಳು, ವೇಷಧಾರಣೆಗೆ ಬೇಕಾದ ಗಿಲೀಟಿನ

ಆಭರಣಗಳು, ಕನ್ನಡಿಗಳು, ನಟನಟಿಯರು ವಿಶ್ರಮಿಸಿಕೊಳ್ಳುವ ಸ್ಥಳಗಳು, ಕ್ಯಾಮರಾಗಳು, ಚಿತ್ರಗ್ರಹಣ ಮಾಡುವಾಗ ಬಿಡುವ ದೀಪಗಳು ಇದೆಲ್ಲ ವನ್ನೂ ವಿಜಯನು ತೋರಿಸಿದನು. ಎಲ್ಲ ಸಾಮಗ್ರಿಗಳೂ ಉತ್ತಮ ದರ್ಜೆಯ ಅಂಗಡಿಗಳಲ್ಲಿ ಪದಾರ್ಥಗಳನ್ನು ಅಣಿ ಮಾಡಿ ಇಟ್ಟಿರುವಂತೆ ಇಡಲ್ಪಟಿದ್ದವು. ಗೋಡಬೋಲೆಯು ಯಂತ್ರಗಳನ್ನು ಆಡಿಸುವ ಕ್ರಮ, ಕ್ಯಾಮರಾ ನಡೆಸುವ ರೀತಿ, ದೀಪದ ಪ್ರಭೆಯನ್ನು ಹೆಚ್ಚಿಸುವ, ಕಡಿಮೆ ಮಾಡುವ ಚಮತ್ಕಾರ ಎಲ್ಲವನ್ನೂ ಉತ್ಸಾಹದಿಂದ ತೋರಿಸಿದನು.

ಭಟ್ಟನು " ಟೀಕಾರಾಂ. ಇದೆಲ್ಲವೂ ನಿಮಗೆ ಒಪ್ಪಿಗೆಯಾಗಿದೆಯೇ ?" ಎಂದು ಕೇಳಿದನು.

ಟೀಕಾರಾಮನು " ಹೌದು ! ಈ ಸ್ಟುಡಿಯೊ ಅಚ್ಚುಗಟ್ಟು ಮಾಡಿರು ವುದು ಗೋಡುಬೋಲೆ ಮತ್ತು ನಾನು. ನಮ್ಮಿಬ್ಬರ ಇಷ್ಟದಂತೆ ಆಗಿದೆ. ನೀವು ನಾವು ಇದುವರೆಗೆ ಇಪ್ಪತ್ತು ಸಹಸ್ರ ರೂಪಾಯಿಗಳನ್ನು ವೆಚ್ಚ ಮಾಡಿದ್ದೇವೆ. ಆ ಮಾಲೀಕ ಮಾರ್ವಾಡಿಯು ಮಾರಿ ಬಿಡುವುದಾದರೆ ಎರಡು ಲಕ್ಷ ರೂಪಾಯಿಗಳ ಹೆಚ್ಚು ಲಾಭವನ್ನು ಕೊಟ್ಟು ನೀವು ಕೊಂಡು ಕೊಂಡು ಬಿಡಿರಿ. ಹಾಲಿವುಡ್‌ನವರು ಕೂಡಾ ಈ ಸ್ಟುಡಿಯೋ ನೋಡಿ ದರೆ ಅಚ್ಚರಿಗೊಳ್ಳದಿರರು " ಎಂದು ಹೇಳಿದನು.

ಮಾತನಾಡುತ್ತ ನಿಂತಿದ್ದಂತೆಯೇ ಅವರಿಗೆ ತಿಳಿಯದೆಯೇ ಗೋಡ್ ಬೋಲೆಯು " ಭಟ್ಟ-ಲಕ್ಷ್ಮಿದೇವಿ-ವಿಜಯರ ಫೋಟೋ ತೆಗೆದು ಅಲ್ಲಿಯೇ ತೊಳೆದು ಆ ಚಿತ್ರವನ್ನು ಕಾಪೀ ಮಾಡಿ ಆ ಕಾಪಿಯನ್ನು ಲಕ್ಷ್ಮಿದೇವಿ ವಿಜ ಯರ ಕೈಗೆ ತಂದು ಕೊಟ್ಟನು.

ಲಕ್ಷ್ಮಿದೇವಿಯು ಗಾಬರಿಯಿಂದ ಆ ಪಟವನ್ನು ನೋಡುತ್ತಾ ಭಟ್ಟನ ಕಡೆಗೆ ತೋರಿಸಿ " ಇದೇನು ? ಯಾವಾಗ ಈ ಪಟವನ್ನು ತೆಗೆದರು ?" ಎಂದಳು.

ಗೋಡ್‌ಬೋಲೆಯು " ಈಗ ಇದೇ ಕ್ಷಣ ತೆಗೆದಿದ್ದೇವೆ " ಎಂದು ಹೇಳಿದನು.

ಲಕ್ಷ್ಮಿಯು ಸಂತೋಷವನ್ನು ವ್ಯಕ್ತಪಡಿಸಿದಳು. ಗೋಡ್‌ಬೋಲೆಯು ಒಂದು ರೋಜಾ ಹೂವಿನ ಮಾಲೆಯನ್ನು ತಂದು ಲಕ್ಷ್ಮಿಯ ಕೊರಳಿಗೆ

ಹಾಕಿದನು. ಭಟ್ಟನಿಗೂ, ವಿಜಯನಿಗೂ ಪುಷ್ಪಗಳನ್ನು ಅರ್ಪಿಸಿದನು. ಲಕ್ಷ್ಮಿಯು ನಾಚಿಕೆಯಿಂದ ಆ ಹಾರವನ್ನು ತೆಗೆದು ಕೈಯಲ್ಲಿ ಹಿಡಿದುಕೊಂಡಳು. ಆ ಮೂವರೂ ಮನೆಗೆ ಹೊರಟು ಹೋದರು.

ಲಕ್ಷ್ಮಿಯು ಮಹಡಿಯ ಮೇಲೆ ಮೇಜಿನ ಮೇಲೆ ಆ ಪಟವನ್ನೂ ಹಾರವನ್ನೂ ಇಟ್ಟು ಕೋಣೆಗೆ ಹೋಗಿ ಬಟ್ಟೆಗಳನ್ನು ಬದಲಾಯಿಕೊಂಡು ಬಂದಳು.

ಮೂವರೂ ಭೋಜನಕ್ಕೆ ಕುಳಿತರು. ಭಟ್ಟನು ಕವಿಯ ಏರ್ಪಾಡನ್ನು ಪ್ರಶಂಸೆ ಮಾಡಿದನು.

ವಿಜಯನು “ ಭಟ್ಟ ! ನೀನರಿಯೆ. ಗೋಡಬೋಲೆ, ಟೀಕಾರಾಂ ಅವರಿಬ್ಬರೂ ಪಿಶಾಚಗಳಂತೆ ಕೆಲಸ ಮಾಡುತ್ತಾರೆ. ಅನ್ನಾಹಾರಗಳ ನೆನಪೇ ಅವರಿಗಿರುವುದಿಲ್ಲ. ನಾನೆಷ್ಟೋ ಸ್ಟುಡಿಯೋಗಳನ್ನು ನೋಡಿದ್ದೇನೆ. ಇಂಥಾ ಶ್ರದ್ಧಾವಂತ ಕೆಲಸಗಾರರನ್ನು ಕಂಡಿಲ್ಲ ” ಎಂದು ಹೇಳಿದನು.

ಭಟ್ಟನು “ ಮುಂದೇನು ಮಾಡುತ್ತೀರಿ ?” ಎಂದು ಕೇಳಿದನು.

ವಿಜಯನು “ ಸೀನರಿಗಳನ್ನು ತಯಾರು ಮಾಡುತ್ತೇವೆ. ಡ್ರೆಸ್ಸುಗಳನ್ನು ತಯಾರು ಮಾಡಬೇಕಾಗಿದೆ ” ಎಂದು ಹೇಳಿದನು.

ಭಟ್ಟನು “ ಅಲ್ಲಿ ಸೀನರಿಗಳೂ ಡ್ರೆಸ್ಸುಗಳೂ ಇದ್ದುವಲ್ಲಾ ” ಎಂದನು.

ವಿಜಯನು “ ಅದೊಂದೂ ನಮ್ಮದಲ್ಲ. ಆ ಸ್ಟುಡಿಯೋಗೆ ಸೇರಿದ ಪದಾರ್ಥಗಳು. ನಮ್ಮ ಚಿತ್ರಕ್ಕೆ ಅದರಲ್ಲಿ ಉಪಯೋಗವಾಗುವುದು ಅತಿ ಸ್ವಲ್ಪ ” ಎಂದು ಹೇಳಿದನು.

ಲಕ್ಷ್ಮಿಯು “ ಅದೆಲ್ಲಾ ಸರಿ, ನಿಮ್ಮ ನಟ-ನಟಿಯರು ಸಿದ್ಧರಾಗಬೇಡವೇ ? ಅವರಿಗೆ ನೀವು ಈ ನಿಮ್ಮ ಕಥೆಯನ್ನು ಅಭ್ಯಾಸ ಮಾಡಿಸಬೇಡವೇ ?” ಎಂದು ಕೇಳಿದಳು.

ವಿಜಯನು “ ಓ ! ಅದು ಬೇಕಾದಷ್ಟಿದೆ. ಅದನ್ನು ಆರಂಭಿಸಲು ಇನ್ನೂ ಪುರುಸತ್ತಿಲ್ಲ. ಎಲ್ಲವನ್ನೂ ಮಾಡುತ್ತೇನೆ ” ಎಂದು ಹೇಳಿದನು.

ಲಕ್ಷ್ಮಿಯು “ ಇದೆಲ್ಲಾ ಯಾವಾಗ ನೀವು ಮಾಡಿ ಮುಗಿಸುತ್ತೀರಿ ? ನಿಮ್ಮ ಪಟವನ್ನು ನಾವು ತೆರೆಯ ಮೇಲೆ ನೋಡುವುದು ಇನ್ನೆಷ್ಟು ದಿವಸಗಳಿಗೆ ?'' ಎಂದು ಕೇಳಿದಳು.

ವಿಜಯನು " ಎರಡೇ ತಿಂಗಳುಗಳಲ್ಲಿ ಎಲ್ಲವನ್ನೂ ಕಲಿಸಿ ಬಿಡುತ್ತೇನೆ. ಪಟದ ನಿರ್ಮಾಣಕ್ಕೆ ಹೆಚ್ಚು ದಿನಗಳೇನೂ ಬೇಕಾಗಿಲ್ಲ. ಈಗ ನೋಡಿ, ನಿಮ್ಮ ಪಟವನ್ನು ಎಷ್ಟು ಬೇಗ ತೆಗೆದು ಕೊಟ್ಟೆನೋ ಅಷ್ಟೇ ಬೇಗ ಚಿತ್ರ ಪಟದ ನಿರ್ಮಾಣವಾಗಿಬಿಡುತ್ತದೆ " ಎಂದು ಹೇಳಿದನು.

ಲಕ್ಷ್ಮಿಯು ಅತ್ಯಂತ ಸಂತಸವನ್ನು ವ್ಯಕ್ತಪಡಿಸಿದಳು.

ಮಾರನೆಯ ದಿನದಿಂದ ಪುನಃ ಕವಿಯು ಅದೃಶ್ಯನಾದನು, ಅವನ ಕಾರ್ಯ ಕ್ಷೇತ್ರವು ಸ್ಟುಡಿಯೋವಿನಲ್ಲಿ. ಮನೆಯಿಂದ ಅಲ್ಲಿಗೆ ಭೋಜನವು ಹೋಗುತ್ತಿದ್ದಿತು. ಭಟ್ಟನೂ ಲಕ್ಷ್ಮಿಯೂ ಇಬ್ಬರೇ ಮನೆಯಲ್ಲಿರುತ್ತಿದ್ದರು. ಸಂಧ್ಯಾಕಾಲ ಇಬ್ಬರೇ ಸುತ್ತಿಕೊಂಡು ಬರುತ್ತಿದ್ದರು.

ಭಟ್ಟನು ಲಕ್ಷ್ಮಿಯನ್ನು ಬಹಳ ಬಲಾತ್ಕರಿಸಿ ಎರಡು ಮೂರು ಬಾರಿ ಎಲಿಫೆಂಟಾ ದ್ವೀಪಕ್ಕೆ ಕರೆದುಕೊಂಡು ಹೋಗಿದ್ದನು. ಸಮುದ್ರದಲ್ಲಿ ಬೋಟಿನ ಮೇಲೆ ಹೋಗುವುದು, ಆ ದ್ವೀಪದಲ್ಲಿ ಸಂಚರಿಸುವುದು ಅದೇನೋ ಲಕ್ಷ್ಮಿಗೆ ಪ್ರಿಯವಾಗಿಯೇ ಇತ್ತು. ಆದರೆ ಅಲ್ಲಿ ಕಣ್ಣಿಗೆ ಕಾಣುವ ಸ್ತ್ರೀಪುರುಷರ ಚಲನವಲನಗಳು ಲಕ್ಷ್ಮಿಗೆ ಪ್ರಿಯಕರವಾಗಿರಲಿಲ್ಲ.

ಲಕ್ಷ್ಮಿಯು ಭಟ್ಟನನ್ನು ಕುರಿತು " ನೀವು ನನ್ನನ್ನು ಹೀಗೆ ವಿಹಾರಕ್ಕೆ ತಯಾರು ಮಾಡಬೇಕೆಂದು ಇಲ್ಲಿಗೆ ಕರೆತರುವಿರೇನು ?" ಎಂದು ಹಾಸ್ಯ ಮಾಡಿದಳು.

ಭಟ್ಟನು " ಲಕ್ಷ್ಮಿ, ನೀನು ವಿದ್ಯಾವತಿ. ಎಷ್ಟೋ ಓದಿದ್ದೀ. ಪುರಾಣಗಳ ಕಥೆಗಳನ್ನು ಓದಿರುವೆ. ಇಲ್ಲಿನ ವಿಹಾರಗಳನ್ನು ನೋಡಿ ಸ್ವೇಚ್ಛಾವಿಹಾರವೆಂದು ನೀನು ತಿರಸ್ಕರಿಸುತ್ತೀಯೆ. ಸೆರಗು ಜಾರಿದರೆ ನಾಚುತ್ತೀಯೆ. ಆ ಪುರಾಣಗಳಲ್ಲಿ ವರ್ಣಿಸಿರುವ ವಿಹಾರಗಳು ಇದೇ ರೀತಿಯಾಗಿಲ್ಲವೇನು ? ಮೊನ್ನೆ ವಿಜಯನು ಕಿನ್ನರ ಕನ್ನಿಕೆಯರ ವರ್ಣನೆಯನ್ನು ಓದಿದನಲ್ಲಾ. ಅದು ಹೇಗಿತ್ತು ? ಮಾಘ ಕಾವ್ಯದ ಜಲಕ್ರೀಡೆಯ ವರ್ಣನೆಯನ್ನು ಅವನು ಹೇಗೆ ಬಣ್ಣಿಸಿದನು ? ಅವರಲ್ಲೆಲ್ಲಾ ನಾರಿತ್ವವಿಲ್ಲವೇನು ? ಆ ಕವಿಗಳೆಲ್ಲರೂ ಸಭ್ಯರಾದ ಕವಿಗಳಲ್ಲವೇನು ? ನೀನು ಮಾತಿಮಾತಿಗೂ ಹಳ್ಳಿಯ ಹುಡುಗಿಯಂತೆ ನಾಚುವೆಯೇಕೆ ?" ಎಂದು ಕೇಳಿದನು.

ಲಕ್ಷ್ಮಿಯು, " ನಿಜ. ಅವರೆಲ್ಲಾ ಮಹಾ ಕವಿಗಳೇ ಹೌದು. ಅವರ ವರ್ಣನೆಯು ಮಹಾ ಕಾವ್ಯಗಳೇ ಅಹುದು. ಆದರೆ. ನೀವು ನಮ್ಮ ಮದುವೆಗೆ ಮುಂಚೆ ಹಳ್ಳಿಯ ಹುಡುಗಿಯನ್ನು ಮದುವೆಯಾಗಬೇಕೆಂದು ಹೇಳುತ್ತಿರಲಿಲ್ಲವೇ ? ಇಷ್ಟು ದಿನಗಳ ಮೇಲೆ ನಮ್ಮ ದಾಂಪತ್ಯ ಸ್ನೇಹವು ಇಷ್ಟು ಬೆಳೆದ ಮೇಲೆ ನಮ್ಮ ಪ್ರೇಮವು-ಹಾಲು ಸಕ್ಕರೆಗಳಂತೆ ಹೀಗೆ ಬೆರೆತ ಮೇಲೆಯೂ, ನಾನು ಹಳ್ಳಿಯ ಹುಡುಗಿಯಾಗಿಯೇ ಇದ್ದೇನೆಂದು ನೀವು ಹೇಳಿದರೆ ಅದೊಂದು ಪ್ರಶಸ್ತಿಯೇ ಅಲ್ಲವೇನು ?" ಎಂದು ಹೇಳಿದಳು.

ಭಟ್ಟನು ಪ್ರೇಮೋನ್ಮಾದದಿಂದಲಕ್ಷ್ಮಿಯನ್ನು ಬಾಚಿ ಆಲಂಗಿಸಿಕೊಂಡು " ಲಕ್ಷ್ಮೀ, ನೀನು ಹಳ್ಳಿಯ ಹುಡುಗಿ. ಕಣ್ವಾಶ್ರಮದಲ್ಲಿ ಇದ್ದ ಶಕುಂತಲೆಯಂತೆ ಹಳ್ಳಿಯ ಹುಡುಗಿ. ಸಮುದ್ರ ಮಥನದಿಂದ ಎದ್ದ ಲಕ್ಷ್ಮಿಯಂತೆ ಸಾಗರ ಕನ್ನಿಕೆ. ಹಿಮವಂತನ ತಪ್ಪಲಿನಲ್ಲಿ ಶಿವನ ನೃತ್ಯವನ್ನು ನೋಡುತ್ತ ನಿಂತ ಪಾರ್ವತಿಯಂತೆ ಗಿರಿಕನ್ನಿಕೆ. ಚಿತ್ರಕೂಟದಲ್ಲಿ ರಾಮನನ್ನು ವಿಶಾಲ ನೇತ್ರಗಳಿಂದ ಪ್ರಣಯ ಪಾಶದಲ್ಲಿ ಕಟ್ಟುತ್ತಿರುವ ಸೀತೆಯಂತೆ ವನಲಕ್ಷ್ಮಿ!" ಎಂದು ಲಕ್ಷ್ಮಿಯ ಅಧರವನ್ನು ಚುಂಬಿಸಿದನು.

ಲಕ್ಷ್ಮಿಯ ಮುಖವು ಕೆಂಪಾಗಿತ್ತು. ಹಣೆಯಲ್ಲಿ ಬೆವರು ಹನಿಗಳು ಮೂಡಿದವು.

ಅವಳು ತನ್ನ ಮುಕುಳಿತ ನಯನಗಳಿಂದ ನಿಷೇಧಿಸುತ್ತ ಪಿಸು ಮಾತಿನಿಂದ " ಪ್ರಿಯ ! ನಾಥ ! ಇದು ಸ್ವೇಚ್ಛಾ ವಿಹಾರವಲ್ಲದೇ, ಮತ್ತೇನು ? ನೋಡಿ, ಕಣ್ಣು ತೆರೆದು ನೋಡಿ. ಆ ದೂರದಲ್ಲಿ ಇರುವ ಕಣ್ಣುಗಳಿಗೆ ಹೇಗೆ ಕಾಣುತ್ತಿದ್ದೇವೆ, ನೋಡಿ. ನಮ್ಮ ಪರಿಚಯವಿದ್ದವರು ಯಾರಾದರೂ ಕಂಡಿದ್ದರೆ ಅವರಿಗೆ ನಾವು ಹೇಗೆ ಮುಖ ತೋರಿಸುವುದು ?" ಎಂದು ಹೇಳುತ್ತಾ ಭಟ್ಟನ ಬಾಹು ಬಂಧನದಿಂದ ಬಿಡಿಸಿಕೊಂಡು ದೂರ ಸರಿದಳು.

ಅವರಿಬ್ಬರೂ ರಾತ್ರಿ ಬಹಳ ಹೊತ್ತಾದ ಮೇಲೆ ಬೋಟಿನಲ್ಲಿ ಕುಳಿತು ಹಿಂತಿರುಗಿದರು.

ಮೋಟಾರಿನಲ್ಲಿ ಭಟ್ಟನು ಲಕ್ಷ್ಮಿಯೊಡನೆ " ಲಕ್ಷ್ಮಿ. ನಾನೇನಾದರೂ ತಪ್ಪು ಮಾಡಿದೆನೇನು ?" ಎಂದನು.

ಲಕ್ಷ್ಮಿಯು " ತಪ್ಪೋ ಸರಿಯೋ ! ಇನ್ನು ಮೇಲೆ ಎಂದೂ ಹೀಗಾಡ

ಬೇಡಿರಿ. ಗಾಂಭೀರ್ಯವಾಗಿ ಇರುವುದನ್ನು ಕಲಿತುಕೊಳ್ಳಿರಿ. ಅದೇ ಸಂಸಾರಿಗಳ ಲಕ್ಷಣ " ಎಂದು ಹೇಳಿದಳು.

ಇಬ್ಬರೂ ಮನೆಯನ್ನು ಸೇರಿದರು.

ಭಟ್ಟನು ಎರಡು ಮೂರು ದಿನಗಳ ನಂತರ ಲೋನ್‌ವಾಲಾಕ್ಕೆ ತಾನೇ ಕಾರನ್ನು ನಡಿಸಿಕೊಂಡು ಹೋದನು. ಪ್ರಭುರಾಜರ ಮನೆಯ ಕಾಂಪೌಂಡಿನೊಳಗೆ ಕಾರು ಹೋಯಿತು. ಕಾರಿನಿಂದಿಳಿದು ವಿಸಿಟರುಗಳು ಕೂರುವ ಕೋಣೆಯನ್ನು ಪ್ರವೇಶಿಸಿ ಅಲ್ಲಿದ್ದ ಹುಡುಗನನ್ನು ನೋಡಿ ಪ್ರಭುರಾಜರಿದ್ದಾರೆಯೇ ?" ಎಂದು ಕೇಳಿದನು.

ಹುಡುಗನು " ಇಲ್ಲ. ಅವರು ಪುಣೆಗೆ ಹೋಗಿದ್ದಾರೆ " ಎಂದು ಹೇಳಿದನು.

ಭಟ್ಟನು " ಅವರ ಪತ್ನಿಯರೂ ಹೋಗಿದ್ದಾರೆಯೋ ? ಅವರು ಇಲ್ಲಿಯೇ ಇದ್ದಾರೆಯೋ ?" ಎಂದು ಕೇಳಿದನು.

ಹುಡುಗನು " ಅವರಿಲ್ಲೇ ಇದ್ದಾರೆ " ಎಂದು ಉತ್ತರ ಕೊಟ್ಟನು.

ಭಟ್ಟನು " ಒಳಗೆ ಹೋಗಿ ಪ್ರಭುರಾಜರು ಯಾವಾಗ ಬರುತ್ತಾರೆಂದು ಕೇಳಿಕೊಂಡು ಬಂದು ಹೇಳುವೆಯಾ ?" ಎಂದನು.

ಹುಡುಗನು ಒಳಗೆ ಹೋದನು. ಸ್ವಲ್ಪ ಹೊತ್ತಾಯಿತು. ಅವನು ಹಿಂದಕ್ಕೆ ಬರಲಿಲ್ಲ. ಭಟ್ಟನ ಮನಸ್ಸಿನಲ್ಲಿ ಎಷ್ಟೋ ವಿಕಲ್ಪಗಳು ಬಂದವು. ರೇವಾದೇವಿಯವರಿಗೆ ಉತ್ತರವನ್ನು ಹೇಳಿ ಕಳಿಸುವಷ್ಟು ಸೌಜನ್ಯವಿಲ್ಲವೆ ? ಎಂದುಕೊಂಡನು. ಅವಳು ಅಷ್ಟು ಕಠಿಣ ಸ್ವಭಾವದವಳೇ ? ಅಂತಹ ಲಾವಣ್ಯವತಿಯ ಹೃದಯದಲ್ಲಿ ಇಷ್ಟು ಕಾಠಿಣ್ಯವೇ ? ಎಂದುಕೊಳ್ಳುತ್ತಿದ್ದನು.

ಹುಡುಗನು ಹೊರಗೆ ಬಂದು ಭಟ್ಟನನ್ನು ಒಳಗಡೆ ಕರೆದುಕೊಂಡು ಹೋದನು.

ಪ್ರಶಸ್ತವಾಗಿ ಅಲಂಕರಿಸಲ್ಪಟ್ಟಿದ್ದ ಕೋಣೆಯೊಳಗೆ ಭಟ್ಟನು ಪ್ರವೇಶ ಮಾಡಿದನು. ನೆಲಕ್ಕೆ ದಪ್ಪನೆಯ ಹಚ್ಚ ಹಸುರಿನ ರತ್ನಕಂಬಳಿಯು ಹಾಸಲ್ಪಟ್ಟಿದ್ದಿತು. ಅಲ್ಲಿದ್ದ ಸೋಫಾಗಳು, ಕುರ್ಚಿಗಳು ಎಲ್ಲವೂ ಹಸುರು ಬಣ್ಣ

ದವೆ ಆಗಿದ್ದುವು. ಗೋಡೆಗೂ ಎಲೆ ಹಸುರು ಬಣ್ಣ. ಕಿಟಕಿಗಳಿಗೆಲ್ಲಾ ಹಸುರು ಪರದೆಗಳು. ಕೋಣೆಯು ಸೂರ್ಯ ಪ್ರಕಾಶವನ್ನು ತಡೆಗಟ್ಟಿದ್ದ ಕೋಣೆ. ಒಳಗೆ ಬೆಳದಿಂಗಳಂತೆ ಸೌಮ್ಯ ಪ್ರಕಾಶವನ್ನು ಬಿರುತ್ತಿದ್ದ ವಿದ್ಯುತ್ ಪ್ರಕಾಶ. ಭಟ್ಟನು ಕಣ್ಣು ತೆರೆದು ನೋಡಿದನು. ರೇವಾದೇವಿಯು ಒಂದು ಸೋಫಾದ ಹತ್ತಿರ ನಿಂತಿದ್ದಳು. ಎರಡು ಮೂರು ಕನ್ನಡಿಗಳಲ್ಲಿ ಭಟ್ಟನು ರೇವಾದೇವಿಯ ಪ್ರತಿಬಿಂಬವನ್ನು ನೋಡಿದನು. ಅವನಿಗೆ ಗಾಬರಿಯಿಂದ ತತ್ತರಿಸುವಂತಾಯಿತು. ಸ್ಥಿರನಾಗಿ ದೂರದಲ್ಲಿ ನಿಂತು ರೇವಾದೇವಿಗೆ ಕೈ ಮುಗಿದನು. ರೇವಾ ಕರಿಯ ರೇಸಿಮೆಯ ಸೀರೆಯನ್ನುಟ್ಟಿದ್ದಳು. ಅದೇ ಬಣ್ಣದ ರವಿಕೆ. ಕೈಯ್ಯಲ್ಲಾಗಲೀ ಕೊರಳಿನಲ್ಲಾಗಲೀ ಆಭರಣಗಳಿರಲಿಲ್ಲ. ತಲೆಯ ಕೂದಲುಗಳನ್ನು ಗಂಟು ಹಾಕಿದ್ದಳು. ಆ ಗಂಟು ಹೆಗಲಿನ ಮೇಲೆ ಬಿದ್ದಿದ್ದಿತು. ಎಡ ಭುಜದ ಮೇಲೆ ಒಂದು ದೊಡ್ಡ ಟರ್ಕಿಯ ಟವಲು ಜೋಲಾಡುತ್ತಿದ್ದಿತು.

ರೇವಾ ಆ ಟವಲಿನ ಕೊನೆಯಿಂದ ಮುಖವನ್ನು ಒರಸಿಕೊಳ್ಳುತ್ತಾ ನಮಸ್ತೇ ಭಟ್ಟರೇ ! ಕುಳಿತುಕೊಳ್ಳಿರಿ " ಎಂದು ಹೇಳಿದಳು.

ಭಟ್ಟನು ಸಮೀಪದಲ್ಲಿದ್ದ ಸೋಫಾದ ಮೇಲೆ ಕುಳಿತನು.

ರೇವಾ " ಏನು ಭಟ್ಟರೆ. ಬೆಳಗಿನ ಹೊತ್ತು ಇಷ್ಟು ದೂರ ಬಂದಿದ್ದೀರಿ ?" ಎಂದಳು.

ಭಟ್ಟನು " ರೇವಾದೇವಿ ! ನಿಮ್ಮನ್ನೂ ಪ್ರಭುರಾಜರವರನ್ನೂ ನಮ್ಮ ಮನೆಗೆ ಆಹ್ವಾನ ಮಾಡಲು ಬಂದಿದ್ದೇನೆ "

" ಅದಕ್ಕೇನು ಆಗಬಹುದು. ಯಾವತ್ತು ಬರಬೇಕು ?"

" ನಿಮಗೆ ಯಾವತ್ತು ಅನುಕೂಲವಾದರೆ ಆವತ್ತು ಬರಬಹುದು. ನಾನು ಇಂದೇ ಕರೆದುಕೊಂಡು ಹೋಗಬೇಕೆಂದು ಬಂದೆ "

" ನಾವು ಇವತ್ತೇ ಸಂತೋಷದಿಂದ ಬರುತ್ತಿದ್ದೆವು. ಸೇಟ್‌ರವರು ಪುಣೆಗೆ ಹೋಗಿದ್ದಾರೆ. ರಾತ್ರಿ ಹಿಂತಿರುಗಿ ಬರುತ್ತಾರೆ. ನಾಳೆ ಬರಬಹುದಷ್ಟೆ ?"

" ಅಗತ್ಯವಾಗಿ ಬರಬೇಕು. ಮಧ್ಯಾಹ್ನ ನಾನೂ ನನ್ನ ಪತ್ನಿಯೂ ನಿಮ್ಮಗಳಿಗಾಗಿ ಕಾದಿರುತ್ತೇವೆ. ನಮ್ಮ ಮನೆಯು ಸೇಟ್‌ರವರಿಗೆ ಗೊತ್ತಿದೆ.

ರೇವಾ ನಕ್ಕಳು. " ನನಗೂ ಗೊತ್ತಿದೆ. ಸೇಟರು ಒಂದು ದಿನ ಅತ್ತ ಕಡೆ ಕರೆದುಕೊಂಡು ಬಂದು ತೋರಿಸಿದರು. ಲಕ್ಷ್ಮೀನಿವಾಸ ಎಂದು ಶಿಲೆಯ ಬೋರ್ಡು ಇದೆ. ಅದು ನಿಮ್ಮ ಸೌಭಾಗ್ಯವತಿಯರ ಶುಭನಾಮವೆಂದು ಕಾಣುತ್ತದೆ " ಎಂದಳು.

ಭಟ್ಟನು ನಕ್ಕನು.

ರೇವಾ ಹೇಳಿದಳು " ನನಗೂ ಆಸೆ. ತಮ್ಮ ಲಕ್ಷ್ಮಿದೇವಿಯರ ಪರಿಚಯ ಮಾಡಿಕೊಳ್ಳುವ ಕುತೂಹಲ. ಅವರು ಬಿ. ಎ. ಪರೀಕ್ಷೆ ಮಾಡಿದ್ದಾರಂತೆ "

ಭಟ್ಟನು ತಲೆದೂಗಿ ಸಮ್ಮತಿಯನ್ನು ಸೂಚಿಸಿದನು.

ರೇವಾ " ನಿಮ್ಮ ಚಿತ್ರಪಟದ ತಯಾರಿಕೆಯು ಎಲ್ಲಿಯ ವರೆಗೆ ಬಂದಿದೆ ? ಎಂದಳು.

" ಚೆನ್ನಾಗಿ ಕೆಲಸ ನಡೆಯುತ್ತಿದೆ "

" ಪಟವು ತಯಾರಾಗಲು ಇನ್ನೆಷ್ಟುದಿನ ಬೇಕು ?

" ಆರು ತಿಂಗಳ ಕಾಲವಾಗಬಹುದು "

" ನಿಮ್ಮ ನಟ-ನಟಿಯರನ್ನೆಲ್ಲಾ ನಮಗೆ ತೋರಿಸುವುದಿಲ್ಲವೇ ?"

" ತೋರಿಸದೇ ಉಂಟೇ? ಆದರೆ ಅವರನ್ನೆಲ್ಲಾ ಚಿತ್ರಪಟದಲ್ಲಿ ನೋಡುವುದೇ ಲೇಸು. ನೀವು ಅವರನ್ನು ಪ್ರತ್ಯಕ್ಷವಾಗಿ ನೋಡಿದರೆ ನಮ್ಮ ಪಟವು ನಿಸ್ಸಾರವಾದದ್ದೆಂದು ಕೊಳ್ಳುತ್ತೀರಿ "

" ಅದೇನೂ ಇಲ್ಲ. ನಾವು ಚಿತ್ರಪಟಗಳನ್ನು ನೋಡುವುದಿಲ್ಲವೇ ? ಅದೆಲ್ಲಾ ಮನಸ್ಸಿಗೆ ಆಹ್ಲಾದಕರವಾಗಿರುವುದಿಲ್ಲವೇ ?"

ಭಟ್ಟನು ಮತ್ತೊಮ್ಮೆ ಆಹ್ವಾನವನ್ನು ಕೊಟ್ಟು ಮನೆಗೆ ಹೊರಡಲು ಅನುಜ್ಞೆಯನ್ನು ಬೇಡಿದನು.

ರೇವಾ " ಸ್ವಲ್ಪ ಚಹಾ ತೆಗೆದುಕೊಳ್ಳಿರಿ. ಮನೆಗೆ ಬಂದವರನ್ನು ಹಾಗೆಯೇ ಕಳುಹಿಸಿದರೆ ಸೇಟರು ಏನೆಂದಾರು ? ಎಂದಳು.

ಮಾತು ಮುಗಿಯುವಷ್ಟರಲ್ಲಿ ಚಹಾ ತಟ್ಟೆಯನ್ನು ತೆಗೆದುಕೊಂಡು ಹುಡುಗಿಯೊಬ್ಬಳು ಒಳಗೆ ಬಂದಳು. ಭಟ್ಟನ ಸೋಫಾದ ಮುಂದೆ ಒಂದು ಟೀಪಾಯಿಯನ್ನು ತೆಗೆದಿಟ್ಟು ಆ ತಟ್ಟೆಯನ್ನು ಅದರ ಮೇಲಿಟ್ಟಳು.

ರೇವಾ ತಾನು ಕುಳಿತಿದ್ದ ಆಸನದಿಂದ ಎದ್ದು ಬಂದು ತಾನೇ ಟೀಯನ್ನು ಸೇರಿಸಿ, ಭಟ್ಟನ ಕೈಗೆ ಕೊಟ್ಟಳು. "ತೆಗೆದುಕೊಳ್ಳಿರಿ" ಎಂದು ಮೃದು ಮಾತಿನಿಂದ ಹೇಳಿದಳು.

ರೇವಾ ಸಮೀಪಕ್ಕೆ ಬಂದು ನಿಂತಾಗ ಭಟ್ಟನ ಹೃದಯವು ನಡುಗಲಾರಂಭಿಸಿತು. ಅವಳೇ ಕೈಯಿಂದ ಚಹಾ ಬಟ್ಟಲನ್ನೆತ್ತಿ ಭಟ್ಟನ ಕೈಗೆ ಕೊಟ್ಟಾಗ ಭಟ್ಟನು ಜ್ಞಾನಶೂನ್ಯನಾದವನಂತೆ ಆಗಿದ್ದನು. ಚಹಾ ಕುಡಿಯುತ್ತಾ ಒಂದೆರಡು ಬಾರಿ ರೇವಾದೇವಿಯನ್ನು ಆಪಾದಮಸ್ತಕವಾಗಿ ಓರೆಗಣ್ಣಿನಿಂದ ನೋಡಿದನು. ಅದು ರೇವಾದೇವಿಗೆ ತಿಳಿಯಿತೋ ಇಲ್ಲವೋ ಭಟ್ಟನು ಮಾತ್ರ ಆ ದೇವಿಯ ಮೂರ್ತಿಯನ್ನು ಹೃದಯದಲ್ಲಿ ಪ್ರತಿಷ್ಠಿಸಿದನು. ಮತ್ತೊಮ್ಮೆ ಕೈ ಮುಗಿದು "ನಾಳೆಯ ದಿನ ನೀವಿಬ್ಬರೂ ನಮ್ಮ ಮನೆಗೆ ಬರಬೇಕು" ಎಂದು ವಿನಯದಿಂದ ಪ್ರಾರ್ಥಿಸಿ "ರೇವಾದೇವಿಯ ಸಮ್ಮತಿಯನ್ನು ಪಡೆದು ಹೊರಗೆ ಹೊರಟನು.

ರೇವಾದೇವಿಯು ಭಟ್ಟನನ್ನು ಸಾಗುಕಳುಹಿಸಲು ಹೊರಗಿನ ವರಾಂಡಕ್ಕೆ ಬಂದಳು. ಭಟ್ಟನು ಮತ್ತೊಮ್ಮೆ ಅವಳಿಗೆ ವಂದಿಸಿ ತನ್ನ ಕಾರಿನಲ್ಲಿ ಕುಳಿತುಕೊಂಡನು.

ಆ ಅಂತಃಪುರದಲ್ಲಿ ಕಂಡ ರೇವಾದೇವಿಯ ರೂಪಿಗಿಂತಲೂ ಈ ಸೂರ್ಯ ಪ್ರಕಾಶದಲ್ಲಿ ಅರಳಿದ ಕಮಲದಂತೆ ಪ್ರಫುಲ್ಲಿತವಾಗಿದ್ದ ಅವಳ ಮುಖವು ಮತ್ತಷ್ಟು ಪ್ರಕಾಶಮಾನವಾಗಿ ಕಂಡಿತು. ಭಟ್ಟನು ಕಾರಿನಲ್ಲಿ ಕುಳಿತು ಹಿಂತಿರುಗಿ ನೋಡುತ್ತಾ ಹೊರಟನು. ಕಾರು ಮನೆಯ ಗೇಟನ್ನು ಬಿಟ್ಟು ಹೋಗುವವರೆಗೆ ರೇವಾ ನೋಡುತ್ತ ನಿಂತಿದ್ದಳು. ಅನಂತರ ಒಳಗೆ ಹೊರಟು ಹೋದಳು.

ಭಟ್ಟನು ಕಾರಿನಲ್ಲಿ ಹೋಗುತ್ತಾ "ಈ ರೇವಾ ಎಷ್ಟು ಚೆಲುವೆ. ಇವಳ ಸ್ನಿಗ್ಧ ಸೌಂದರ್ಯವು ಎಂತಹ ಪುರುಷನನ್ನಾದರೂ ಹುಚ್ಚು ಹಿಡಿಸುತ್ತದೆ. ಒಂದುದಿನ, ಒಂದೇ ಒಂದು ದಿನ ಈ ದೇವ ಕನ್ಯೆಯು ನನ್ನ ಕೈಗೆಸಿಕ್ಕಿದರೆ" ಎಂದುಕೊಂಡು ಹೋಗುತ್ತಿದ್ದನು. ಪುನಃ ಪುನಃ ಅವನ ಕಣ್ಣಿನ ಮುಂದೆ

ಆ ರೇವಾ ಬಿಂಬವೇ ನಾನಾ ರೂಪದಲ್ಲಿ ಬಂದು ನಿಂತಂತೆ ಭೋಧೆಯಾಗುತ್ತಿದ್ದಿತು. ಭಟ್ಟನು ಮನೆಗೆ ಬಂದು ಸೇರಿದನು.

ಲಕ್ಷ್ಮಿಯನ್ನು ಕರೆದು, "ಲಕ್ಷ್ಮಿ. ನಾಳೆಯ ದಿನ ಮಧ್ಯಾಹ್ನ ಪ್ರಭು ರಾಜರೂ ಅವರ ಪತ್ನಿಯವರೂ ನಮ್ಮ ಮನೆಗೆ ಬರುತ್ತಾರೆ. ಅವರಿಗೆ ದಿವ್ಯವಾದ ಆತಿಥ್ಯವನ್ನು ಕೊಡಬೇಕು" ಎಂದು ಹೇಳಿದನು.

ಲಕ್ಷ್ಮಿಯು "ಏನೇನು ಆತಿಥ್ಯಗಳನ್ನು ಸಿದ್ಧಗೊಳಿಸಬೇಕೋ ಹೇಳುವಿರಾ?" ಎಂದಳು.

ಭಟ್ಟನು "ಅದೊಂದೂ ನನಗೆ ತಿಳಿಯುವುದಿಲ್ಲ. ನಿನಗೆ ಹೇಗೆ ತೋರುತ್ತೊ ಹಾಗೆ ಮಾಡು. ನೀನು ಅವರಿಗೆ ಕೊಡುವ ಆತಿಥ್ಯವು ಅವರು ಸಂತೋಷಪಟ್ಟುಕೊಂಡು ಹೋಗುವಂತಿರಬೇಕು. ನಿನಗೂ ಸಂತೋಷವಾಗುವಂತಿರಬೇಕು" ಎಂದು ಹೇಳಿದನು.

ಮಾರನೆಯ ದಿನ ಪ್ರಾತಃಕಾಲದಿಂದಲೇ ಲಕ್ಷ್ಮಿಯು ಸಡಗರಕ್ಕೆ ಆರಂಭಿಸಿದಳು. ಮಹಡಿಯ ಮೇಲೆ ಅತಿಥಿಗಳನ್ನು ಎಲ್ಲಿ ತಂದು ಕೂಡಿಸಬೇಕು, ಎಲ್ಲಿ ಫಲಹಾರಗಳನ್ನು ಕೊಡಬೇಕು, ಎಲ್ಲಿ ಮಾತನಾಡಬೇಕು, ಇದನ್ನೆಲ್ಲಾ ಆಲೋಚನೆ ಮಾಡಿ ಭಟ್ಟನಿಗೆ ತಿಳಿಸಿದಳು.

ಭಟ್ಟನು ಎಲ್ಲವನ್ನೂ ಒಪ್ಪಿಕೊಂಡನು. ಭಟ್ಟನು ಮನೆಯಿಂದ ಹೊರಗೆ ಹೋಗಿದ್ದಾಗ ತೋಟಕ್ಕೆ ಹೋಗಿ ಹೂಗಳನ್ನು ಬಿಡಿಸಿ ತಂದು ತಾನೇ ಕುಳಿತುಕೊಂಡು ಎರಡು ಸೊಗಸಾದ ಹಾರಗಳನ್ನು ಕಟ್ಟಿ ತನ್ನ ಕೋಣೆಯಲ್ಲಿ ಒದ್ದೆಯ ಬಟ್ಟೆಯಲ್ಲಿ ಮುಚ್ಚಿಟ್ಟಳು. ಮೇಜಿನ ಮೇಲೆ ಎಳೆ ಚಿಗುರಿನ ಎಲೆಗಳನ್ನೂ ಹೂಗಳನ್ನೂ ಪುಷ್ಪದಾನುಗಳಲ್ಲಿಟ್ಟು ಅಲಂಕರಿಸಿದಳು.

ಮಧ್ಯಾಹ್ನ ಅಥಿತಿಗಳು ಬರುವ ಸಮಯವು ಸಮೀಪಿಸುತ್ತಾ ಬಂದಿತು. ತನ್ನ ಕೋಣೆಯಲ್ಲಿ ಅಲಂಕರಿಸಿಕೊಳ್ಳುತ್ತಿದ್ದಳು. ಭಟ್ಟನು ಮೆಲ್ಲಗೆ ಕೋಣೆಯ ಬಾಗಿಲನ್ನು ಸರಿಸಿ ಒಳಗೆ ಪೋದನು. ಲಕ್ಷ್ಮಿಯು ಕನ್ನಡಿಯಲ್ಲಿ ಕುರುಳು ತಿದ್ದಿಕೊಳ್ಳುತ್ತಿದ್ದಳು.

ಭಟ್ಟನು ಕಳ್ಳನಂತೆ ಮೆಲ್ಲಡಿಯಿಡುತ್ತಾ ಹೋಗಿ ಮೃದುವಾಗಿ

ಲಕ್ಷ್ಮಿಯ ಬೆನ್ನು ತಟ್ಟಿ "ಚೆನ್ನಾಗಿದೆ, ಲಕ್ಷ್ಮಿ. ನಾನು ಒಪ್ಪಿದ್ದೇನೆ" ಎಂದು ಹೇಳಿದನು.

ಲಕ್ಷ್ಮಿಯು ನಾಚಿಕೊಂಡು ನಿಂತುಕೊಂಡಳು.

ಭಟ್ಟನು " ಲಕ್ಷ್ಮಿ. ಇಂದು ಬರುವ ಅತಿಥಿಗಳು ಸಾಮಾನ್ಯರಲ್ಲ. ಆ ರೇವಾ ಬಲು ಚೆಲುವೆ. ವಯ್ಯಾರದ ಹುಡುಗಿ. ನಿಮ್ಮಿಬ್ಬರ ಸೌಂದರ್ಯದ ಕಾಂಪಿಟೇಷನ ನಡೆಯುವಂತಿದೆ, ನೀನು ನೋಡಿಕೋ " ಎಂದು ಹೇಳಿದನು.

ಲಕ್ಷ್ಮಿಯು " ನನಗೇನೂ ಕಾಂಪಿಟೇಷನ ಆಸೆಯಿಲ್ಲ. ಅದೆಲ್ಲಾ ನಿಮ್ಮ ಸ್ಟುಡಿಯೋ ಮಾತುಗಳು. ನಿಮ್ಮ ಗೌರವಕ್ಕಾಗಿ, ನಾನು ಸ್ವಲ್ಪ ಅಲಂಕರಿಸಿಕೊಂಡಿದ್ದೇನೆ. ಅದಕ್ಕೆ ನಿಮ್ಮ ಪರಿಹಾಸ್ಯವು ಬೇಕಾಗಿಲ್ಲ " ಎಂದಳು.

ಭಟ್ಟನು ಹೊರಗೆ ಹೋಗುತ್ತಿದ್ದಾಗ, ಲಕ್ಷ್ಮಿಯು ಮೆಲ್ಲನೆಯ ಧ್ವನಿಯಿಂದ " ಆ ರೇವಾದೇವಿಯು ಅಷ್ಟು ಸುಂದರಿಯೋ?" ಎಂದು ಕೇಳಿದಳು.

ಆ ಮಾತುಗಳು ಭಟ್ಟನ ಕಿವಿಗೆ ಬಿದ್ದವು. ಭಟ್ಟನು ಕೇಳಿದರೂ ಕೇಳಿಸದವನಂತೆ ನಗುತ್ತಾ ಹೊರಟು ಹೋದನು.

ಭಟ್ಟನು ಕೆಳಗಿನ ಹಾಲಿನಲ್ಲಿ ನಿರೀಕ್ಷಿಸುತ್ತಾ ಕುಳಿತಿದ್ದನು. ಪ್ರಭುರಾಜ್‌ನ ಕಾರು ಬಂದು ಬಾಗಿಲಿನಲ್ಲಿ ನಿಂತಿತು. ಭಟ್ಟನು ಕಾರಿನ ಸಮೀಪಕ್ಕೆ ಹೋಗಿ ದಂಪತಿಗಳಿಬ್ಬರನ್ನೂ ವಂದಿಸಿ ಕಾರಿನಿಂದ ಕೆಳಗಿಳಿದನು. ಇಬ್ಬರೂ ಭಟ್ಟನ ಮನೆಯ ಹಾಲಿಗೆ ಬಂದರು. ಅಲ್ಲಿ ಲಕ್ಷ್ಮಿಯು ನಿಂತು ರೇವಾದೇವಿಯನ್ನು ಸ್ವಾಗತಿಸಿದಳು.

ರೇವಾದೇವಿಯು ಲಕ್ಷ್ಮಿಯ ಕೈ ಹಿಡಿದುಕೊಂಡು ಕುಶಲ ಪ್ರಶ್ನೆಯನ್ನು ಮಾಡಿದಳು. ಆ ಹಾಲಿನಲ್ಲಿ ಎರಡು ದೊಡ್ಡ ತೈಲಚಿತ್ರಗಳಿದ್ದವು. ರೇವಾ ಒಂದು ಚಿತ್ರದ ಮುಂದೆ ಹೋಗಿ ನಿಂತುಕೊಂಡಳು. ಆ ಚಿತ್ರವನ್ನು ತಲೆ ಎತ್ತಿ ನೋಡಿದಳು.

ಪಕ್ಕದಲ್ಲಿದ್ದ ಲಕ್ಷ್ಮಿಯ ಹೆಗಲ ಮೇಲೆ ಕೈ ಹಾಕಿ " ಲಕ್ಷ್ಮಿದೇವಿ. ಇದು ನಿಮ್ಮ ಚಿತ್ರ. ಚಿತ್ರಕಾರನು ಬಹಳ ಕೌಶಲ್ಯದಿಂದ ಚಿತ್ರಿಸಿದ್ದಾನೆ. ಪ್ರತಿಯೊಂದು ಸೂಕ್ಷ್ಮಾಂಶಗಳಲ್ಲಿಯೂ ಕೌಶಲ್ಯವನ್ನು ತೋರಿದ್ದಾನೆ. ನಾನೆಲ್ಲಿಯೂ ಇಷ್ಟು ಸೊಗಸಾದ ಚಿತ್ರವನ್ನು ನೋಡಿಲ್ಲ " ಎಂದು

ಹೇಳುತ್ತಾ, ಲಕ್ಷ್ಮಿಯ ಮುಖವನ್ನು ನೋಡಿ "ಆದರೆ ನಿಮ್ಮ ಮುಖಕಾಂತಿಯನ್ನು ಪೂರ್ಣವಾಗಿ ತರಲಾರದೇ ಚಿತ್ರಕಾರನು ಸೋತಿದ್ದಾನೆ" ಎಂದು ಹೇಳಿದಳು.

ಲಕ್ಷ್ಮಿಯ ನಗುಮೊಗದಲ್ಲಿ ನಾಚಿಕೆಯು ಮೂಡಿತು.

ಅವಳು "ರೇವಾದೇವಿ. ಇಲ್ಲಿ ಬನ್ನಿರಿ" ಎಂದು ಕೈ ಹಿಡಿದೆಳೆದು ಎದುರು ಗೋಡೆಯಲ್ಲಿದ್ದ ಮತ್ತೊಂದು ತೈಲ ಚಿತ್ರವನ್ನು ತೋರಿಸಿದಳು.

ರೇವಾದೇವಿಯು ಆ ಚಿತ್ರವನ್ನು ನೋಡಿ "ಲಕ್ಷ್ಮೀದೇವಿ. ಇದು ನಿಮ್ಮ ಸಹೋದರಿಯ ಚಿತ್ರಪಟವೇನು ?" ಎಂದು ಕೇಳಿದಳು.

ಲಕ್ಷ್ಮಿಯು "ಅಲ್ಲ. ಅದು ನಮ್ಮ ಅತ್ತಿಗೆಯವರ ಚಿತ್ರಪಟ" ಎಂದಳು.

ರೇವಾ "ಅವರ ಹೆಸರೇನು ? ಎಲ್ಲಿದ್ದಾರೆ ? ಎಂದು ಕೇಳಿದಳು.

"ಅವರು ಮದರಾಸಿನಲ್ಲಿದ್ದಾರೆ. ಹೆಸರು ಕಲ್ಯಾಣಿ"

ರೇವಾ "ಚಿತ್ರಪಟವು ಚೆನ್ನಾಗಿದೆ" ಎಂದು ಹೇಳಿ ಮುಂದೆ ಹೆಜ್ಜೆ ಇಟ್ಟಳು.

ಭಟ್ಟನು ಪ್ರಭುರಾಜ್‌ನನ್ನು ಮಹಡಿಯ ಮೇಲಕ್ಕೆ ಕರೆದುಕೊಂಡು ಹೋಗಿದ್ದನು. ಲಕ್ಷ್ಮಿಯೂ ರೇವಾದೇವಿಯೂ ಮಹಡಿಯ ಮೇಲಕ್ಕೆ ಹೋದರು.

ಲಕ್ಷ್ಮಿಯು ರೇವಾದೇವಿಯನ್ನು ಆಸನದ ಮೇಲೆ ಕುಳ್ಳಿರಿಸಿದಳು. ಲಕ್ಷ್ಮೀದೇವಿಯು ನಿಂತೇ ಇದ್ದಳು.

ರೇವಾ "ಲಕ್ಷ್ಮೀ. ನೀವೂ ಕುಳಿತುಕೊಳ್ಳಬಾರದೇ ?" ಎಂದಳು.

ಭಟ್ಟನು ರೇವಾದೇವಿಯ ಕಡೆಗೆ ತಿರುಗಿ "ಅವರು ಹೋಸ್ಟ್. ಅವರು ಹೇಗೆ ಕುಳಿತುಕೊಳ್ಳುತ್ತಾರೆ ?" ಎಂದನು.

ರೇವಾ "ನೀವೋ ?" ಎಂದು ನಗುತ್ತಾ ಕೇಳಿದಳು.

ಭಟ್ಟನು "ನಮ್ಮ ಮನೆಯಲ್ಲಿ ಲಕ್ಷ್ಮೀದೇವಿಯವರೇ ಯಜಮಾನಿ. ನಮ್ಮ ಮನೆಯ ಹೆಸರು ಲಕ್ಷ್ಮೀನಿವಾಸ" ಎಂದು ಹೇಳಿದನು.

ರೇವಾ ಲಕ್ಷ್ಮಿಯ ಮುಖವನ್ನು ನೋಡಿದಳು. ಲಕ್ಷ್ಮಿಯು ಮಾತನಾಡಲಿಲ್ಲ. ಸಣ್ಣ ನಗುವನ್ನು ಸೂಸಿದಳು. ಭಟ್ಟನ ಕಡೆಗೆ ತಿರುಗಿ ಕಣ್ಣಿ

ಸನ್ನೆ ಮಾಡಿದಳು. ಭಟ್ಟನು ಪ್ರಭುರಾಜ್‌ರನ್ನೂ ರೇವಾದೇವಿಯನ್ನೂ ಸ್ವಲ್ಪ ಫಲಹಾರ ಸ್ವೀಕರಿಸಬೇಕೆಂದು ಪ್ರಾರ್ಥಿಸಿದನು.

ಪಕ್ಕದ ವಿಶಾಲವಾದ ಕೋಣೆಯಲ್ಲಿ ಫಲಹಾರದ ಸಣ್ಣ ಸಣ್ಣ ತಟ್ಟೆಗಳೆಲ್ಲವೂ ಮೇಜದ ಮೇಲೆ ಅಣಿಮಾಡಲ್ಪಟ್ಟಿದ್ದವು. ಮೂವರೂ ಕುಳಿತುಕೊಂಡರು. ಲಕ್ಷ್ಮಿಯು ಆ ತಟ್ಟೆಗಳನ್ನು ಅತಿಥಿಗಳ ಮುಂದಿಟ್ಟಳು. ಹಣ್ಣಿನ ರಸದ ಲೋಟಾಗಳನ್ನು ತಂದಿಟ್ಟಳು.

ರೇವಾದೇವಿಯು ಲಕ್ಷ್ಮಿಯನ್ನು ಕುರಿತು. “ಲಕ್ಷ್ಮಿದೇವಿ. ಇದು ಸರಿಯಾಗಿಲ್ಲ. ನೀವು ಕುಳಿತುಕೊಳ್ಳಿರಿ” ಎಂದು ಹೇಳಿ, ತನ್ನ ಪಕ್ಕದಲ್ಲಿ ಲಕ್ಷ್ಮಿಯನ್ನು ಕೂಡಿಸಿ, ಒಂದೆರಡು ಫಲಹಾರದ ತಟ್ಟೆಗಳನ್ನು ಮುಂದೆ ಸರಿಸಿದಳು.

ಅವರೆಲ್ಲರೂ ಫಲಹಾರವನ್ನು ಸ್ವೀಕರಿಸಿದರು.

ಪರಿಚಾರಕನು ಚಹಾ ಬಟ್ಟಲುಗಳನ್ನು ತಂದಿಟ್ಟನು. ಚಹಾ ಸೇವನೆ ಮಾಡಿದ ನಂತರ ಅತಿಥಿಗಳು ಹೊರಗಡೆಯ ಹಾಲಿಗೆ ಬಂದರು.

ಪ್ರಭುರಾಜ್‌ನು ಗೋಡೆಯಲ್ಲಿದ್ದ ಚಿತ್ರಪಟಗಳನ್ನೆಲ್ಲಾ ನೋಡುತ್ತಿದ್ದನು. ರೇವಾದೇವಿಯು ಆ ಹಾಲಿನಲ್ಲಿದ್ದ, ಪಿಯಾನೋದ ಹತ್ತಿರ ಹೋಗಿ ನೋಡಿದಳು. ಕೀಲು ತಿರುಗಿಸಿ ರೀಡ್ಸ್ ಮೇಲೆ ಒಂದು ಬಾರಿ ಕೈಯ್ಯಾಡಿಸಿದಳು.

ಲಕ್ಷ್ಮಿದೇವಿಯು ರೇವಾದೇವಿಯ ಹಿಂದೆ ನಿಂತು “ಬಾರಿಸಿರಿ, ಕೇಳೋಣ” ಎಂದು ಹೇಳಿದಳು.

ರೇವಾದೇವಿಯು ಲಕ್ಷ್ಮಿಯ ಕೈ ಹಿಡಿದು ಎಳೆದು ಪಕ್ಕದಲ್ಲಿದ್ದ ಆಸನದ ಮೇಲೆ ಕುಳ್ಳಿರಿಸಿ, “ಇಂದು ನೀವು ಪಿಯಾನೋ ನುಡಿಸಿರಿ. ಮತ್ತೊಂದು ದಿನ ನಿಮ್ಮನ್ನು ನಮ್ಮ ಮನೆಗೆ ಕರೆದುಕೊಂಡು ಹೋಗುತ್ತೇನೆ. ಅಂದೆಲ್ಲಾ ನೀವು ನಮ್ಮ ಮನೆಯಲ್ಲಿಯೇ ಇರಬೇಕು. ಅಂದು ನನಗೆ ಬರುವ ಪಾಠವನ್ನೆಲ್ಲಾ ನಿಮಗೆ ಒಪ್ಪಿಸಿಬಿಡುತ್ತೇನೆ. ಇದು ನಿಮ್ಮ ಪಿಯಾನೋ, ಇದರ ಲಗುಬಿಗಿಗಳನ್ನು ನೀವು ಚೆನ್ನಾಗಿ ಬಲ್ಲಿರಿ. ಕೊಂಚ ನಿಮ್ಮ ಕೈ ತಗುಲಿದರೆ ನಿಮ್ಮ ಪಿಯಾನೋ ಜೀವಂತವಾಗಿ ಧ್ವನಿಗೈಯ್ಯುತ್ತದೆ” ಎಂದು ಹೇಳಿದಳು.

ಲಕ್ಷ್ಮಿಯು ಭಟ್ಟನ ಕಡೆಗೆ ಕಣ್ಣು ತಿರುಗಿಸಿ ನೋಡಿದಳು. ಭಟ್ಟನು ಕಣ್ಣುಸನ್ನೆ ಮಾಡಿದನು. ಲಕ್ಷ್ಮಿಯು ಆಧ್ಯತೆಯಿಂದ ಪಿಯಾನೋವನ್ನು ಬಾರಿಸಲಾರಂಭಿಸಿದಳು.

ಲಕ್ಷ್ಮಿಯು ಪಿಯಾನೋ ಬಾರಿಸುತ್ತಿದ್ದಾಗ ವಿಜಯನು ಬಂದನು.

ಅವನು ಮಹಡಿಯ ಮೇಲಕ್ಕೆ ಬಂದು ಪ್ರಭುರಾಜ್‌ರಿಗೆ ಕೈ ಮುಗಿದು " ಕ್ಷಮಿಸಬೇಕು. ನಾನು ನಿಮ್ಮ ಟೀ ಹೊತ್ತಿಗೇ ಬಂದು ಸೇರಬೇಕೆಂದಿದ್ದೆ. ನಮ್ಮ ಭಟ್ಟರು ಅಪ್ಪಣೆ ಮಾಡಿದ್ದರು. ಸ್ಟುಡಿಯೋದಲ್ಲಿ ಸ್ವಲ್ಪ ಹೊತ್ತಾಗಿ ಬಿಟ್ಟಿತು. ಕ್ಷಮಿಸಿರಿ " ಎಂದು ಹೇಳಿದನು.

ಪ್ರಭುರಾಜರು " ಬಾಧಕವೇನೂ ಇಲ್ಲ. ನಮ್ಮ ಮನೆಗೇ ಮತ್ತೊಂದು ದಿನ ಬಂದು ಬಿಡಿರಿ. ಅಲ್ಲಿಯೇ ನಿಮ್ಮ ಸಾನ್ನಿಧ್ಯವನ್ನು ಅನುಗ್ರಹಿಸಿರಿ. ಈ ತಪ್ಪಿಗೆ ತಕ್ಕ ಕ್ಷಮೆಯು ದೊರೆಯುತ್ತದೆ " ಎಂದು ಹೇಳಿದನು.

ಲಕ್ಷ್ಮಿಯು ವಿಜಯನು ಬಂದ ಸ್ವಲ್ಪ ಹೊತ್ತಿನಲ್ಲಿಯೇ ಸಂಗೀತವನ್ನು ಮುಗಿಸಿದಳು.

ವಿಜಯನು " ಏಕೆ, ಲಕ್ಷ್ಮೀದೇವಿ. ನಾನು ಬರುತ್ತಲೇ ನಿಲ್ಲಿಸಿ ಬಿಟ್ಟಿರಿ ? ಶಿವಪೂಜೆಯ ಮಧ್ಯೆ ಕರಡಿಯು ಬಂದ ಹಾಗಾಯಿತೇ ?" ಎಂದನು.

ಲಕ್ಷ್ಮಿಯು ' ಇಲ್ಲ, ಇಲ್ಲ, ಕವಿರಾಜ. ನನ್ನ ಸಂಗೀತವು ಮುಗಿದೇ ಹೋಗಿದ್ದಿತು. ನೀವು ಕೊನೆಯಲ್ಲಿ ಬಂದಿರಿ " ಎಂದಳು.

ವಿಜಯನು ರೇವಾದೇವಿಯನ್ನು ವಂದಿಸಿ ಕ್ಷಮಾಪಣೆ ಕೇಳಿದನು.

ರೇವಾ " ನಿಮಗೆ ಕ್ಷಮೆಯು ದೊರೆತೇ ಬಿಟ್ಟಿತಲ್ಲಾ. ನಮ್ಮ ಸೇಟರು ಆಹ್ವಾನ ಕೊಟ್ಟರು. ನೀವು ಒಪ್ಪಿದಿರಿ. ಕ್ಷಮೆಯು ಸಿಕ್ಕಿಯೇ ಹೋಯಿತು. ಆದರೆ ಆ ಆಹ್ವಾನವು ನಿಮ್ಮ ಮೂವರಿಗೂ ಕೊಟ್ಟಿರುವ ಆಹ್ವಾನ. ಇವರಿಬ್ಬರನ್ನೂ ಕರೆತರುವುದು ನಿಮ್ಮ ಹೊಣೆ " ಎಂದು ನಗುತ್ತ ಹೇಳಿದಳು.

ವಿಜಯನು " ಇವರಿಬ್ಬರ ಜೊತೆಯಲ್ಲಿ ನಾನು ಇದ್ದೇ ಇರುತ್ತೇನೆ " ಎಂದನು.

ರೇವಾದೇವಿಯು ಲಕ್ಷ್ಮೀದೇವಿಯನ್ನು ಕುರಿತು "ನಮಗಿನ್ನು ಅಪ್ಪಣೆ ಕೊಡುವಿರಾ. ಹೊರಡುತ್ತೇವೆ" ಎಂದಳು.

ಭಟ್ಟನು "ಇಷ್ಟು ಬೇಗ ಹೊರಟು ಬಿಡಬೇಕೆ? ಇನ್ನೂ ಸ್ವಲ್ಪ ಕಾಲ ನಮ್ಮ ಮನೆಯಲ್ಲಿ ಇದ್ದರೆ ಸಂತೋಷವಾಗುತ್ತಿತ್ತು" ಎಂದನು.

ರೇವಾದೇವಿಯು "ನಿಮ್ಮ ಮನೆಯಲ್ಲಿರುವುದಕ್ಕೆ ನನಗೆ ಷ್ಟೋ ಸಂತೋಷ. ಈ ಲಕ್ಷ್ಮೀದೇವಿಯವರ ಗೆಳೆತನವನ್ನು ಮಾಡಿಕೊಟ್ಟರಿ. ನನಗೆ ಅವರನ್ನು ಬಿಟ್ಟು ಹೋಗಲು ಇಷ್ಟವೇ ಇಲ್ಲ" ಎಂದಳು.

ಪ್ರಭುರಾಜನು "ರೇವಾ. ನೀನು ಹೇಳುವುದು ಸರಿಯಾಗಿದೆ. ನಿನಗೆ ಈ ಲಕ್ಷ್ಮೀದೇವಿಯರ ಸಾನ್ನಿಧ್ಯವು ಒಪ್ಪುತ್ತದೆ. ನಾನು ಹೋಗುತ್ತೇನೆ" ಎಂದು ಹೇಳಿದನು.

ರೇವಾ ಹೇಳಿದಳು. "ನನಗೇನೋ ನಿಜವಾಗಿ ಹಾಗೆಯೇ ತೋರುತ್ತದೆ. ನಮ್ಮಿಬ್ಬರಿಗೂ ಬೇರೆ ಬೇರೆ ಮನೆಗಳೇ ಬೇಡೆನ್ನಿಸುತ್ತದೆ. ಒಂದೇ ಮನೆಯಲ್ಲಿದ್ದು ಸರ್ವದಾ ಇಬ್ಬರೂ ಆಡಿಪಾಡಿ ಸಂತೋಷಿಸಬೇಕೆನ್ನುತ್ತದೆ" ಎಂದು ಹೇಳಿದಳು.

ಲಕ್ಷ್ಮಿಯು ಒಳಗೆ ಹೋಗಿ ತಾಂಬೂಲದ ತಟ್ಟೆಗಳನ್ನು ತಂದು ಮೇಜದ ಮೇಲಿಟ್ಟಳು. ಲಕ್ಷ್ಮಿಯು ಮತ್ತೊಮ್ಮೆ ತನ್ನ ಕೋಣೆಗೆ ಹೋಗಿ ತಾನೇ ಕೈಯಿಂದ ಕಟ್ಟಿದ್ದ ಪುಷ್ಪಹಾರವನ್ನು ತಂದು ರೇವಾದೇವಿಯ ಕೊರಳಿಗೆ ಹಾಕಿದಳು. ಮತ್ತೊಂದು ಹಾರವನ್ನು ತಂದು ಭಟ್ಟನ ಕೈಗೆ ಕೊಟ್ಟನು. ಭಟ್ಟನು ಅದನ್ನು ಪ್ರಭುರಾಜನ ಕೊರಳಿಗೆ ಹಾಕಲು ಹೋದನು.

ಪ್ರಭುರಾಜನು ಭಟ್ಟನ ಕೈ ತಡೆದು "ಆ ಹಾರವನ್ನು ಲಕ್ಷ್ಮೀದೇವಿಯವರ ಕೊರಳಿಗೆ ಹಾಕಿಬಿಡಿರಿ. ಅದು ಹೆಂಗಸರಿಗೆ ಶೋಭಿಸುತ್ತದೆ" ಎಂದು ಹೇಳಿದನು.



ಲಕ್ಷ್ಮೀದೇವಿಯು ತಲೆ ಬಾಗಿಸಿ "ರೇವಾದೇವಿ,. ಈ ಹಾರಗಳನ್ನು ನಿಮ್ಮಿಬ್ಬರಿಗಾಗಿ ನನ್ನ ಕೈಯಿಂದಲೇ ಕಟ್ಟಿ ತಯಾರಿಸಿದ್ದೇನೆ. ನೀವು ಸೇಟರಿಗೆ ಹೇಳಿರಿ. ಸ್ವೀಕರಿಸುವಂತೆ ಹೇಳಿರಿ" ಎಂದಳು.

ರೇವಾ ಎರಡು ಹೆಜ್ಜೆ ಮುಂದಕ್ಕೆ ಹೋಗಿ "ಭಟ್ಟರೇ. ಆ ಹಾರವನ್ನು ನನ್ನ ಕೈಗೆ ಕೊಡಿರಿ. ನಾನು ಈ ಲಕ್ಷ್ಮೀದೇವಿಯವರಿಗೆ ಹಾಕುತ್ತೇನೆ"

ಎನ್ನುತ್ತಾ ಭಟ್ಟನ ಕೈಯಿಂದ ಹಾರವನ್ನು ಕಿತ್ತುಕೊಂಡಳು. ರೇವಾ ಆ ಹಾರವನ್ನು ಲಕ್ಷ್ಮಿಯ ಕೊರಳಿಗೆ ಹಾಕಲು ಹೋದಳು.

ಲಕ್ಷ್ಮಿಯು ರೇವಾದೇವಿಯ ಎರಡು ಕೈಗಳನ್ನೂ ಹಿಡಿದುಕೊಂಡು "ಈಗ ಸರಿಯಾಯಿತು. ಈ ಹಾರವನ್ನು ನೀವೇ ಸೇಟರ ಕೊರಳಿಗೆ ಹಾಕಿಬಿಡಿರಿ. ನನ್ನ ಇಷ್ಟವು ಪೂರ್ತಿಯಾದಂತಾಗುತ್ತದೆ" ಎಂದಳು.

ಎಲ್ಲರೂ ನಕ್ಕರು.

ಪ್ರಭುರಾಜನು "ರೇವಾ. ಆ ಹಾರವನ್ನು ಇಲ್ಲಿ ಕೊಡು. ಅದರಲ್ಲಿ ಏನೋ ಶುಭವಿದೆ. ನಾವೇಕೆ ಬಿಡಬೇಕು? ಲಕ್ಷ್ಮಿದೇವಿಯವರ ಪ್ರಸಾದವೆಂದು ಸ್ವೀಕರಿಸೋಣ. ಎಷ್ಟಾದರೂ ದಕ್ಷಿಣೆಯು ಬ್ರಾಹ್ಮಣರದು. ಅವರೇ ಗೆಲ್ಲಲಿ" ಎಂದು ಹೇಳುತ್ತಾ ರೇವಾದೇವಿಯ ಕೈಯಿಂದ ಹಾರವನ್ನು ಕೈಗೆ ತೆಗೆದುಕೊಂಡು ಕಣ್ಣಿಗೊತ್ತಿಕೊಂಡು ಕೈಯಲ್ಲಿಟ್ಟುಕೊಂಡರು.

ಭಟ್ಟನು ನಗುತ್ತಾ "ಸೇಟ್‌ಜೀ. ನಾನು ಮೊದಲೇ ಹೇಳಲಿಲ್ಲವೇ? ನಮ್ಮ ಮನೆಯು ಲಕ್ಷ್ಮಿದೇವಿಯ ರಾಜ್ಯವೆಂದು. ಈಗ ನೀವೂ ಒಪ್ಪಿದಿರಲ್ಲವೇ?" ಎಂದು ಹಾಸ್ಯ ಮಾಡಿದನು.

ಸೇಟನು ಲಕ್ಷ್ಮಿದೇವಿಗೆ ಕೈ ಮುಗಿದನು. ಅತಿಥಿಗಳಿಬ್ಬರೂ ಹೊರಟರು. ಭಟ್ಟನೂ ಲಕ್ಷ್ಮಿಯೂ ಕಾರಿನವರೆಗೆ ಹೋಗಿ ಸಾಗುಕಳುಹಿಸಿದರು.

ವಿಜಯನು ತಾಂಬೂಲದ ತಟ್ಟೆಗಳನ್ನು ತಂದು ರೇವಾದೇವಿಯ ಕೈಗೆ ಕೊಟ್ಟನು. ಅತಿಥಿಗಳಿಬ್ಬರೂ ಕಾರಿನಲ್ಲಿ ಕುಳಿತು ಹೊರಟರು.

ಕಾರು ಸ್ವಲ್ಪ ದೂರ ಹೋಗುತ್ತಲೇ ಪ್ರಭುರಾಜನು "ರೇವಾ, ಆ ಲಕ್ಷ್ಮಿದೇವಿಯು ಎಂತಹ ಗಾಂಭೀರ್ಯದ ಹೆಣ್ಣು, ನೋಡಿದಿಯಾ?" ಎಂದನು.

ರೇವಾ "ನೀವು ಆ ಹಜಾರದಲ್ಲಿದ್ದ ತೈಲ ಚಿತ್ರವನ್ನು ನೋಡಿದಿರೇನು?" ಎಂದು ಕೇಳಿದಳು.

"ಅಷ್ಟು ಸರಿಯಾಗಿ ನೋಡಲಾಗಲಿಲ್ಲ. ಪರರ ಮನೆಯ ಹೆಂಗಸರ ಚಿತ್ರವನ್ನು ಹೇಗೆ ನೋಡುವುದಕ್ಕೆ ಸಾಧ್ಯವಾಗುತ್ತದೆ?" ಎಂದು ಪ್ರಭುರಾಜನು ಹೇಳಿದನು.

ರೇವಾ " ಸೊಗಸಾದ ತೈಲ ಚಿತ್ರಗಳು. ಅವುಗಳಲ್ಲೊಂದು ಲಕ್ಷ್ಮಿ ದೇವಿಯದು. ಮತ್ತೊಂದು ಲಕ್ಷ್ಮಿಯ ಅತ್ತಿಗೆಯ ದಂತೆ. ಏನು ಸೌಂದರ್ಯ ? ಏನು ಗಾಂಭೀರ್ಯ ? ಆ ಮುಖದಲ್ಲಿ ಎಂತಹ ಕಾಂತಿ ? ಆ ಮನೆಗೆ ಅವೆರಡು ಪಟಗಳೂ ರತ್ನಗಳಂತೆ ಬೆಳಗುತ್ತವೆ " ಎಂದು ಹೇಳಿದಳು.

ಸೇಟನು " ರೇವಾ. ಆ ಲಕ್ಷ್ಮಿದೇವಿಯ ಸಂಗೀತವನ್ನು ಕೇಳಿದೆಯಾ. ಅದೆಂತಹ ಸಂಗೀತ ? ಆ ಕಂಠದ ಮಾಧುರ್ಯ, ಆ ಸಂಗೀತದ ಸೊಬಗು, ದಕ್ಷಿಣ ದೇಶದವರಿಗೆ ವರಪ್ರದಾನವೆಂದು ಕಾಣುತ್ತದೆ. ನೀನೇನಾದರೂ ಪಿಯಾನೋ ಬಾರಿಸಿದ್ದರೆ ನಮಗೆ ಅಪಮಾನವೇ ಆಗುತ್ತಿದ್ದಿತು " ಎಂದನು.

ರೇವಾ ಮುಖದಲ್ಲಿ ನಾಚಿಕೆಯು ಮೂಡಿತು.

ರೇವಾ ಹೇಳಿದಳು. " ಲಕ್ಷ್ಮಿದೇವಿಗೆ ಅದು ಹುಟ್ಟು ಕಲೆ. ನಮ್ಮ ಬೊಂಬಾಯಿ ನಗರದಲ್ಲಿ ಯಾವ ನಟಿಯೂ ಹಾಗೆ ಬಾರಿಸಲಾರಳು " ಎಂದಳು.

ಪ್ರಭುರಾಜನು " ನಮ್ಮ ಸ್ನೇಹಿತರು ಒಳ್ಳೆಯ ಗೃಹಸ್ಥರು. ದಂಪತಿಗಳಿಬ್ಬರೂ ಸರಿಯಾಗಿದ್ದಾರೆ. ಆ ಕವಿ, ಅವನೂ ಬಲು ಗಟ್ಟಿಗ. ಸಾಮಾನ್ಯನೆಂದುಕೊಳ್ಳಬೇಡ. ಅವನ ಯೋಗ್ಯತೆಯು ಮುಂದೆ ತಿಳಿಯುತ್ತದೆ " ಎಂದನು.

ಹಾಗೆಯೇ ಅಂದಿನ ಉಪಚಾರದಿಂದ ಸಂತುಷ್ಟರಾಗಿ ಅವರಿಬ್ಬರೂ ಮನೆಯನ್ನು ಸೇರಿದರು.

ವಿಜಯನು ಫಲಹಾರ ಮಾಡಿ, ಕಾಫಿ ಕುಡಿದು ತಾನು ಸ್ಟುಡಿಯೋಗೆ ಹೋಗುವುದಾಗಿ ಹೇಳಿ ಹೊರಟು ಹೋದನು.

ಭಟ್ಟನು " ಲಕ್ಷ್ಮಿ .ಬೆಳಗಿನಿಂದ ಬಹಳ.ಶ್ರಮಪಟ್ಟಿರುವೆ. ಹೊರಗೆ ಹೋಗಿ ಬರೋಣ ಬರುವೆಯಾ ?" ಎಂದನು.

ಲಕ್ಷ್ಮಿಯೂ ಭಟ್ಟನೂ ಕಾರಿನಲ್ಲಿ ಹ್ಯಾಂಗಿಂಗ್ ಗಾರ್ಡನ್ಸ್‌ಗೆ ಹೊರಟರು.

ಭಟ್ಟನು "ಲಕ್ಷ್ಮಿ, ಇಂದುನಮ್ಮ ಅಥಿತಿಗಳು ಬಹಳ ಸಂತೋಷ ಪಟ್ಟಿದ್ದಾರೆ. ಅದರಲ್ಲಿ ಎರಡು ಅಂಶಗಳು ಮುಖ್ಯವಾದವುಗಳು. ಒಂದು ನಿನ್ನ ಗಾನ. ಮತ್ತೊಂದು ನೀನು ಸಿದ್ಧಪಡಿಸಿದ್ದ ಪುಷ್ಪಹಾರಗಳು. ಇವೆರಡೂ ನನ್ನ ಮನಸ್ಸಿಗೆ ಎಷ್ಟೋ ಸಂತೋಷವನ್ನುಂಟು ಮಾಡಿದವು. ಅವರಿಗೆಷ್ಟು ಸಂತೋಷವಾಗಿರಲಿಕ್ಕಿಲ್ಲ" ಎಂದನು.

ಆ ಸ್ತುತಿಯನ್ನು ಕೇಳಿ ಲಕ್ಷ್ಮಿಯ ಮುಖದಲ್ಲಿ ಪ್ರಸನ್ನ ಭಾವವು ಮೂಡಿತು.

ಭಟ್ಟನು ಆ ಲಕ್ಷ್ಮಿಯ ಪ್ರಸನ್ನ ಮುಖವನ್ನು ಚುಂಬಿಸುವುದಕ್ಕೆ ಹೋದನು.

ಲಕ್ಷ್ಮಿಯು ಎರಡು ಕೈಗಳಿಂದಲೂ ನಿವಾರಿಸುತ್ತಾ "ಬೇಡ-ಬೇಡ" ಎಂದು ಮೃದು ಧ್ವನಿಯಿಂದ ಹೇಳಿದಳು.

ಭಟ್ಟನು "ಲಕ್ಷ್ಮಿ. ಆ ರೇವಾದೇವಿಯ ವಿಚಾರವಾಗಿ ನೀನೇನು ಹೇಳುವೆ ?" ಎಂದನು.

ಲಕ್ಷ್ಮಿಯು ತಲೆಯನ್ನಲ್ಲಾಡಿಸುತ್ತಾ "ಏನೂ ಇಲ್ಲ. ಐಶ್ವರ್ಯವಂತರ ಹೆಣ್ಣು. ಅದಕ್ಕೆ ತಕ್ಕಹಾಗಿದ್ದಾಳೆ" ಎಂದಳು.

ಭಟ್ಟನು "ಅವಳ ಮೈ ಕೋಮಲತೆಯು ಎಷ್ಟು ಚೆನ್ನಾಗಿದೆ ? ಅವಳ ಮೈ ಬಣ್ಣವು ಎಷ್ಟು ಸೊಗಸಾಗಿದೆ ? ಆ ಕೇಶರಾಶಿಯು ಹೇಗೆ ವಿಜೃಂಭಿಸುತ್ತಿದೆ ? ಆ ಕಣ್ಣುಗಳು ಹೇಗೆ ಜ್ವಲಿಸುತ್ತಿವೆ ? ಆ ಮುತ್ತುಗಳು ಆ ಕಂಠವನ್ನು ಹೇಗೆ ಬೆಳಗುತ್ತವೆ ? ಆ ಜಾರ್ಜೆಟ್ ಸೀರೆಯು ಅವಳ ಅಂದಕ್ಕೆ ಎಷ್ಟು ಚಂದಾಗಿದೆ ? ಅದನ್ನೆಲ್ಲಾ ನೀನು ಗಮನಿಸಲಿಲ್ಲವೇನು ?" ಎಂದನು.

ಲಕ್ಷ್ಮಿಗೆ ಸ್ವಲ್ಪ ಕೋಪ ಬಂದಿತು. "ಗಂಡಸರ ಕಣ್ಣಿನಿಂದ ನಾನವಳನ್ನು ನೋಡಲಿಲ್ಲ. ಒಟ್ಟಿನಲ್ಲಿ ಅವಳು ಸೊಗಸುಗಾತಿಯೇನೋ ಹೌದು. ಐಶ್ವರ್ಯದ ಗಾಂಭೀರ್ಯವೇ ಹೊರತು ಹುಟ್ಟು ಗಾಂಭೀರ್ಯವಿಲ್ಲ. ಇದನ್ನು ಯಾವ ಗೃಹಿಣಿಯಾದರೂ ಹೀಗೇ ಹೇಳುತ್ತಾಳೆ. ನಿಮ್ಮಕ್ಕನವರು ನೋಡಿದ್ದರೆ ಸೌಂದರ್ಯವತಿಯಾದರೂ ಚೆಲ್ಲು ಹುಡುಗಿ-ಎಂದು ಹೇಳುತ್ತಿದ್ದರು" ಎಂದಳು.

ಭಟ್ಟನು "ನಾನು ತಪ್ಪು ಮಾಡಿದೆ, ಲಕ್ಷ್ಮಿ. ಹೆಂಗಸಿನ ಮುಂದೆ ಹೆಂಗಸಿನ ಮಾತೆತ್ತಿದರೆ ಜಯವಾಗುವುದುಂಟೇ? ಆ ಮಾತು ಬಿಡು. ಅವರ ಮನೆಯು ಎಷ್ಟು ಚೆನ್ನಾಗಿದೆ, ಬಲ್ಲೆಯಾ? ಸೇಟರು ಮಾರಿಬಿಟ್ಟರೆ ಇಂದೇ ಕೊಂಡುಕೊಳ್ಳಬೇಕೆಂದು ಆಶೆಯಾಗುತ್ತದೆ" ಎಂದನು.

ಲಕ್ಷ್ಮಿಯು "ನಮ್ಮ ಮನೆಯು ನನಗೆ ಚೆನ್ನಾಗಿದೆ. ಮತ್ತೊಬ್ಬರ ಮನೆಯು ಚೆನ್ನಾಗಿದ್ದರೆ ಸಂತೋಷ ಪಡಬಹುದು. ಅದಕ್ಕೆ ಆಶೆ ಪಡುವುದು ತಪ್ಪು" ಎಂದು ಹೇಳಿದಳು.

ಭಟ್ಟನು ಆ ಮಾತನ್ನು ಮುಂದುವರಿಸುವ ಸಾಹಸವನ್ನು ಮಾಡಲಿಲ್ಲ. ಮನಸ್ಸಿನಿಂದ ರೇವಾದೇವಿಯನ್ನು ಮರೆಯುವ ಶಕ್ತಿಯು ಅವನಿಗಿರಲಿಲ್ಲ.

೬

ಕವಿರಾಜ ವಿಜಯನ ಚಿತ್ರಪಟದ ತಯಾರಿಕೆಯು ಭರದಿಂದ ಮುಂದೆ ಸಾಗುತ್ತಲಿದ್ದಿತು. ಸಂಗೀತಕ್ಕೆ ಮದ್ರಾಸಿನಿಂದ ಮಣಿ, ಮೈಸೂರಿನಿಂದ ರಾಜಣ್ಣ, ಬೊಂಬಾಯಿನ ವೃದ್ಧ ಗವಾಯಿ, ಕಾಶೀನಾಥ ಭಾವ ಇವರುಗಳನ್ನು ನೇಮಿಸಿದ್ದರು. ವಿಜಯನು ಗಣಪತಿಯನ್ನು ಮಂಗಳೂರಿನಿಂದ ಕರೆಸಿದನು. ಅವನ ತಯಾರಿಕೆಯನ್ನು ತಾನೇ ಇಟ್ಟುಕೊಂಡನು. ಹಗಲಿರುಳೂ ಅವನು ವಿಜಯನ ಜೊತೆಯಲ್ಲಿಯೇ ಇರಬೇಕು. ವಿಜಯನು ನಟ-ನಟಿಯರನ್ನೆಲ್ಲಾ ಚುನಾಯಿಸಿ ಗೊತ್ತು ಮಾಡಿದನು. ಗೋಡ್ಬೋಲೆ ಮತ್ತು ಟೇಕಾರಾಮರು ವಿಜಯನಿಗೆ ಎಡಬಲ ಭುಜಗಳಂತಿದ್ದರು. ಮೆರೀನ್ ಲೈನ್‌ನಲ್ಲಿಯೇ ಒಂದು ದೊಡ್ಡ ಪ್ಲಾಟನ್ನು ಅಭ್ಯಾಸಕ್ಕಾಗಿ ತೆಗೆದುಕೊಂಡಿದ್ದರು. ಅಲ್ಲಿಯ ಏರ್ಪಾಡುಗಳು ಬಹಳ ವ್ಯವಸ್ಥೆಯಿಂದಿದ್ದವು. ಅದು ನಾಟಕ ಶಾಲೆಯವರ ಆಟದ ಮನೆಯಂತಿರಲಿಲ್ಲ. ಕಲಾ ಶಿಕ್ಷಣ ಶಾಲೆಯಂತಿದ್ದಿತು. ಪಾಠ ಕಲಿಸುವುದಕ್ಕೆ ನಾಲ್ವರು ಉಪಾಧ್ಯಾಯರುಗಳು ನಿಯಮಿಸಲ್ಪಟ್ಟಿದ್ದರು. ಅವರುಗಳು ಸಂಸ್ಕೃತ, ಇಂಗ್ಲಿಷ್ ಭಾಷೆಗಳಲ್ಲಿ ಪ್ರವೀಣರಾಗಿದ್ದರು. ಅಚ್ಚ ಹಿಂದಿಯೂ ಅವರಿಗೆ ಕರತಲಾಮಲಕವಾಗಿದ್ದಿತು. ಸ್ನೇಹಲತಾ ಎಂಬುವರನ್ನು ನರ್ತನಕ್ಕೆ ತೆಗೆದುಕೊಂಡಿದ್ದರು.

ಪರ್ವತ ರಾಜನ ಹೆಂಡತಿ ಮೇನಾ, ಸಖಿಯರು, ಎಲ್ಲ ಪಾತ್ರಗಳಿಗೂ ನಟ–ನಟಿಯರು ಸಿದ್ಧರಾದರು. ವಿಮಲಾದೇವಿಯು ತನ್ನ ಪಾತ್ರವನ್ನೆಲ್ಲಾ ಕಂಠಪಾಠ ಮಾಡಿದ್ದಳು.

ಇಷ್ಟು ಸಿದ್ಧತೆಯಾದ ಮೇಲೆ, ಭಟ್ಟನ ಮನೆಯಲ್ಲಿ ಈ ನಟ–ನಟಿಯರಿಗೆಲ್ಲಾ ಒಂದು ಔತಣ ಸಮಾರಂಭವನ್ನು ಏರ್ಪಡಿಸಿದರು. ಬೊಂಬಾಯಿಯಲ್ಲಿ ಕೆಲವರು ನಟಿಯರಿಗೂ ವಿಶೇಷ ಆಹ್ವಾನವಿದ್ದಿತು. ಸುರಯ್ಯಾ, ದೇವಾನಂದ್, ಮೆಹ್ತಾಬ್, ಸೊಹ್ರಾಬ್ ಮೋದಿ ಇವರುಗಳು ಬಂದಿದ್ದರು. ಈ ಸಮಾರಂಭಕ್ಕೆ ಬರಬೇಕೆಂದು ಪ್ರಭುರಾಜರನ್ನೂ ಅವರ ಪತ್ನಿ ರೇವಾದೇವಿಯವರನ್ನೂ ಆಹ್ವಾನಿಸಲು ಭಟ್ಟನೂ ವಿಜಯನೂ ಪ್ರಭುರಾಜನ ಮನೆಗೆ ಹೋಗಿದ್ದರು. ಅವರಿಬ್ಬರೂ ಆ ಸಮಾರಂಭಕ್ಕೆ ಬರಲು ಸಂತೋಷದಿಂದ ಒಪ್ಪಿದರು. ಇಷ್ಟು ಸಿದ್ಧತೆಗಳಾದ ಮೇಲೆ, ಒಂದು ಸಂಧ್ಯಾ ಕಾಲದಲ್ಲಿ ಭಟ್ಟನೂ, ಲಕ್ಷ್ಮಿಯೂ, ಕವಿಯೂ ತಮ್ಮ ಮನೆಯ ಮಹಡಿಯ ಮೇಲಿನ ವರಾಂಡದಲ್ಲಿ ಮಾತನಾಡುತ್ತ ಕುಳಿತಿದ್ದರು.

ಭಟ್ಟನು ಈ ಔತಣ ಸಮಾರಂಭದ ವಿವರಗಳೆಲ್ಲವನ್ನೂ ಲಕ್ಷ್ಮಿಗೆ ತಿಳಿಸಿದನು.

ಲಕ್ಷ್ಮಿಯು ಸಂತೋಷಪಟ್ಟಳು.

ಲಕ್ಷ್ಮಿಯು " ಈ ಸಮಾರಂಭವೇನೋ ಬಹಳ ಸೊಗಸಾಗಿ ಏರ್ಪಾಡಾಗಿದೆ. ನನಗೆ ಬಹಳ ಸಂತೋಷ. ಇದನ್ನು ನೀವು ಸ್ಟುಡಿಯೋದಲ್ಲಿಯೇ ಏರ್ಪಾಡು ಮಾಡಿದ್ದರೆ ಎಷ್ಟೋ ಚೆನ್ನಾಗಿರುತ್ತಿತ್ತಲ್ಲವೇ ?" ಎಂದಳು.

ಭಟ್ಟನು ನಿರುತ್ತರನಾದನು. ಅವನ ಉತ್ಸಾಹವು ಕುಗ್ಗಿದಂತಾಯಿತು. ಕವಿಯು ಭಟ್ಟನ ಮುಖವನ್ನು ನೋಡಿದನು. ಅವನ ಇಂಗಿತವನ್ನು ಅರಿತನು.

ವಿಜಯನು " ಲಕ್ಷ್ಮಿದೇವಿ. ನಿಮ್ಮ ಸಲಹೆಯು ಬಹಳ ಚೆನ್ನಾಗಿದೆ. ಈ ಸಮಾರಂಭವನ್ನು ಸ್ಟುಡಿಯೋವಿನಲ್ಲಿಯೇ ಮಾಡಬಹುದಾಗಿತ್ತು. ಅಲ್ಲಿ ಇನ್ನೂ ಸ್ಥಳ ವೈಶಾಲ್ಯವಿತ್ತು. ಆದರೆ ಅದು ನಮ್ಮ ಸ್ಥಳವಲ್ಲ. ಪರರ ಸ್ಥಳ. ಅದರಿಂದ ಅಲ್ಲಿ ಏರ್ಪಡಿಸಲು ನಾವು ಒಪ್ಪಲಿಲ್ಲ " ಎಂದು ಹೇಳಿದನು.

ಲಕ್ಷ್ಮಿಯು " ಕವಿರಾಜ. ನಾನು ಈ ನಟನಟಿಯರನ್ನು ಪರದೆಯ

ಮೇಲೆ ನೋಡಿರುವೆನೇ ಹೊರತು, ಇವರನ್ನು ಪ್ರತ್ಯಕ್ಷವಾಗಿ ನೋಡಿಲ್ಲ ಅಲ್ಲಿಈ ನಟನಟಿಯರು ಸ್ವೇಚ್ಛಾವಿಹಾರಕ್ಕೆ ಸ್ವಾತಂತ್ರವಿರುತ್ತಿತ್ತು. ಗೃಹಸ್ಥರ ಮನೆಯಲ್ಲಿ ನಿರ್ಬಂಧವಾಗುವುದಿಲ್ಲವೆ ?" ಎಂದಳು.

ಕವಿಯು ಉತ್ತೇಜಿತನಾಗಿ ಹೇಳಿದನು. "ಲಕ್ಷ್ಮಿದೇವಿ. ನೀವು ವಿದ್ಯಾವತಿ. ಬಹಳ ಗ್ರಂಥಗಳನ್ನೋದಿದ್ದೀರಿ. ಇಂಗ್ಲಿಷ್ ನಾವೆಲ್‌ಗಳನ್ನು ಓದಿದ್ದೀರಿ. ಈ ನಟನಟಿಯರು ನಾಟಕದವರು. ಇವರುಗಳ ವಿಷಯದಲ್ಲಿ ಬಹಳ ತುಚ್ಛ ಭಾವನೆಯನ್ನು ಇಟ್ಟುಕೊಂಡಿದ್ದೀರಿ ನೋಡಿ. ನನ್ನದೂ ಒಂದು ಸಂಕಲ್ಪವಿದೆ ! ನಾನು ಇದೊಂದೇ ಚಿತ್ರವನ್ನು ತಯಾರಿಸುವುದು. ಇದು ಪವಿತ್ರಮಯ ವಾತಾವರಣದಲ್ಲಿ ಸಿದ್ಧವಾಗಬೇಕೆಂದು ನನ್ನ ಸಂಕಲ್ಪ. ಇದನ್ನು ನಟನಟಿಯರಿಗೆಲ್ಲಾ ಉಪದೇಶ ಮಾಡಿದ್ದೇನೆ. ಅನೀತಿಯ ಛಾಯೆಯು ಬಿದ್ದರೆ ನಮ್ಮ ಚಿತ್ರವು ಕಪ್ಪು ಹಿಡಿದು ಹೋಗುವುದೆಂದು ನನ್ನ ಭಾವನೆ. ಆದ್ದರಿಂದಲೇ ಈ ಚಿತ್ರವನ್ನು ನಾನು ತಯಾರು ಮಾಡಲು ಎಂದೂ ಉತ್ಸಾಹವನ್ನು ತೋರಿಸಿರಲಿಲ್ಲ. ಮಹರ್ಷಿಗಳ ದರ್ಶನ ಅನುಗ್ರಹಗಳಿಂದ ನನಗೆ ಧೈರ್ಯ ಬಂದಿದೆ. ನಮ್ಮ ನಟನಟಿಯರು ಈ ಚಿತ್ರವು ಪೂರ್ತಿಯಾಗುವವರೆಗಾದರೂ ಸ್ವೇಚ್ಛಾಚಾರಿಗಳಾಗುವುದಿಲ್ಲವೆಂದು ನನಗೆ ಭರವಸೆಯಿದೆ. ಈ ಸಮಾರಂಭಕ್ಕೆ ಪ್ರಭುರಾಜ ದಂಪತಿಗಳೂ ನೀವು ದಂಪತಿಗಳೂ ಬರಬೇಕು. ಸ್ಟುಡಿಯೋಕ್ಕೆ ಬರಲು ಶ್ರೀಮತಿ ಪ್ರಭುರಾಜರು ಒಪ್ಪಲಿಲ್ಲ. ನೀವೂ ಒಪ್ಪಲಾರಿರೆಂದು ನನಗೆ ತೋರಿತು. ಅಷ್ಟೇ ಅಲ್ಲ. ಈ ನಮ್ಮ ಚಿತ್ರಪಟದ ತಯಾರಿಕೆಯ ಕಂಪೆನಿಗೇ "ಲಕ್ಷ್ಮೀ ಪಿಕ್ಚರ್ಸ್" ಎಂದು ಭಟ್ಟನು ನಾಮಕರಣ ಮಾಡಿದ್ದಾನೆ. ಅದು ನಿಮ್ಮ ಸಾನ್ನಿಧ್ಯವಿಲ್ಲದೇ ಹೇಗೆ ತಾನೆ ಆರಂಭವಾದೀತು ? ಇಷ್ಟು ಕಾರಣಗಳಿಂದ ಈ ಸಮಾರಂಭವು ಈ ಲಕ್ಷ್ಮೀನಿವಾಸದಲ್ಲಿ, ನಿಮ್ಮ ಸಾನ್ನಿಧ್ಯದಲ್ಲಿ ನಡೆಯಬೇಕು" ಎಂದು ಹೇಳಿದನು.

ಲಕ್ಷ್ಮಿಯು "ಇದೇನು ಕವಿರಾಜ ? ಇದಕ್ಕೇಕೆ ಇಷ್ಟು ದೊಡ್ಡ ಉಪನ್ಯಾಸ ? ಇಷ್ಟು ಕಾರಣಗಳೇಕೆ ? ಇಷ್ಟು ವಾದವೇಕೆ ? ಇದು ನಿಮ್ಮ ಸ್ನೇಹಿತರ ಮನೆಯಲ್ಲವೇ ? ಅವರಿಗೆ ಇಲ್ಲಿ ಸಂಪೂರ್ಣ ಅಧಿಕಾರವಿಲ್ಲವೇ ?

ಇದೇನು ವಿಜಯೇಂದ್ರರಾವ್ ? ಎಂದೂ ಕಾಣದ ಉದ್ವೇಗವನ್ನು ಇಂದು ನಿಮ್ಮಲ್ಲಿ ಕಾಣುತ್ತಿದ್ದೇನೆ " ಎಂದು ನಕ್ಕಳು.

ವಿಜಯೇಂದ್ರನು ಅಷ್ಟಕ್ಕೆ ಸುಮ್ಮನಾಗಲಿಲ್ಲ. " ಲಕ್ಷ್ಮೀದೇವಿ. ಈ ಆಹ್ವಾನ ಪತ್ರಿಕೆಯು ಭಟ್ಟನ ಹೆಸರಿನಲ್ಲಿ ಹೊರಡುತ್ತದೆ. ಆದರೆ ಅಪ್ರತ್ಯಕ್ಷವಾಗಿ ಈ ಸಮಾರಂಭಕ್ಕೆ ನೀವೇ ಅಧ್ಯಕ್ಷಿಣಿ. ನಿಮ್ಮಂತಹ ಪತಿವ್ರತೆಯ ಆಶೀರ್ವಾದವು ಬೇಕು " ಎಂದನು.

ಲಕ್ಷ್ಮಿಯು " ಹಾಗಾದರೆ, ನಾನು ಭಾಷಣ ಮಾಡಬೇಕೇನು ? ನನ್ನ ಭಾಷಣವನ್ನು ಬರೆದು ತಯಾರಿಸಿದ್ದೀರೇನು ?" ಎಂದಳು.

ವಿಜಯನು " ಭಾಷಣ ಭೂಷಣಗಳೇನೂ ಇಲ್ಲ. ನಿಮ್ಮ ಸಾನ್ನಿಧ್ಯ, ನಿಮ್ಮ ಸಂತೋಷ, ನಿಮ್ಮ ವರಪ್ರಸಾದಗಳಾದರೆ ಸಾಕು. ಇನ್ನೇನು ಬೇಕು ?" ಎಂದನು.

ಆ ಮಾತು ಅಲ್ಲಿಗೆ ಮುಗಿಯಿತು. ಅವರು ಮೂವರೂ ಏನೇನೋ ಮಾತನಾಡುತ್ತಿದ್ದರು.

ವಿಮಲಾದೇವಿಯ ವಿಚಾರವಾಗಿ ಮಾತು ಬಂತು. ಕಾಶಿನಾಥ ಭಾವನನ್ನಂತೂ ವಿಜಯನು ಕೊಂಡಾಡಿಬಿಟ್ಟನು. ರಾತ್ರಿ ಬಹಳ ಹೊತ್ತಾದ ಮೇಲೆ ಅವರು ವಿಶ್ರಾಂತಿಗೆ ಹೋದರು.

ಶಯನ ಗೃಹದಲ್ಲಿ ಭಟ್ಟನು " ಲಕ್ಷ್ಮೀ. ಯಾವಾಗಲೂ ಮಾತಿನ ಚಾವಟಿಯು ಪೆಟ್ಟು ಕೊಟ್ಟು ಗಂಡಸರನ್ನು ಗೆಲ್ಲುತ್ತಿದ್ದೆ. ಇಂದು ನೋಡಿದೆಯೋ, ಕವಿಯು ನಿನ್ನನ್ನು ಹೇಗೆ ಬಾಯಿ ಮುಚ್ಚಿಸಿ ಬಿಟ್ಟ '' ಎಂದನು.

ಲಕ್ಷ್ಮಿಯು " ಸೋಲು ಗೆಲುವುಗಳ ಮಾತು ಹಾಗಿರಲಿ. ವಿಜಯನ ಸ್ಥಿರ ಪ್ರತಿಜ್ಞೆಯು ನನಗೆ ಆಶ್ಚರ್ಯವನ್ನುಂಟು ಮಾಡಿತು. ತಾತ್ಕಾಲಿಕವಾಗಿಯಾದರೂ ಈ ನಟ-ನಟಿಯರ ಮೇಲೆ ಅವನ ಪ್ರಭಾವವು ಪ್ರತಿಫಲಿಸುತ್ತದೆಂದು ನನಗೆ ಅನ್ನಿಸಿತು '' ಎಂದಳು.

ಭಟ್ಟನು ಮನಸ್ಸಿನಲ್ಲಿಯೇ ಸಂತೋಷ ಪಟ್ಟುಕೊಂಡನು.

**ಶಿವಪಾರ್ವತಿ ಚಿತ್ರಪಟವನ್ನು ತಯಾರಿಸುವ ಕಂಪನಿಗೆ " ಲಕ್ಷ್ಮೀ**

ಪಿಕ್ಚರ್ಸ್" ಎಂದು ಹೆಸರಿಟ್ಟಿದ್ದರು. ಅದರ ಪ್ರಾರಂಭೋತ್ಸವದ ಏರ್ಪಾಡುಗಳನ್ನು ವಿಜಯನು ಅತ್ಯಂತ ಆಸಕ್ತಿಯಿಂದ ಮಾಡುತ್ತಿದ್ದನು.

ಭಟ್ಟನು ಸ್ಟುಡಿಯೋಗೂ ಅಭ್ಯಾಸ ಮಾಡುವ ಮನೆಗೂ ಪ್ರತಿದಿನವೂ ಹೋಗಿ ಬರುತ್ತಿದ್ದನು. ಆದರೆ ವಿಶೇಷವಾಗಿ ವಿಮಲಾ ದೇವಿಯ ಮನೆಯಲ್ಲಿ ಕಾಲ ಕಳೆಯುತ್ತಿದ್ದನು. ವಿಮಲಾದೇವಿಯು ತನ್ನ ಪಾತ್ರವನ್ನು ಯಶಸ್ವಿಯಾಗಿ ನಿರ್ವಹಿಸುವಳೆಂದು ವಿಜಯನಿಗೆ ಸಂಪೂರ್ಣ ಭರವಸೆ ಇತ್ತು. ಎಲ್ಲಾ ನಟ-ನಟಿಯರಿಗೂ ಅದೇ ಭಾವನೆ ಇತ್ತು. ಆದರೂ ದಿವಸಕ್ಕೊಮ್ಮೆ ಅಭ್ಯಾಸದಲ್ಲಿ ವಿಮಲೆಯ ಪಾತ್ರ ವಹಿಸಬೇಕಾಗಿತ್ತು. ಭಟ್ಟನು ಪ್ರಾತಃ ಕಾಲದಿಂದ ಸಂಧ್ಯಾಕಾಲದ ವರೆಗೆ ವಿಮಲೆಯೊಡನೆ ಕಾಲ ಕಳೆಯುತ್ತಿದ್ದನು. ವಿಮಲೆಯು ಎರಡು ಮೂರು ಬಾರಿ ಲಕ್ಷ್ಮೀ ನಿವಾಸಕ್ಕೆ ಬಂದು ಲಕ್ಷ್ಮೀ ದೇವಿಯವರ ಭೇಟಿ ಮಾಡಬೇಕೆಂದು ಭಟ್ಟನನ್ನು ಕೇಳಿದಳು. ಭಟ್ಟನು ಯಾವುದಾದರೊಂದು ನೆಪವನ್ನು ಹೇಳಿ ಆ ಭೇಟಿಯನ್ನು ಮುಂದೆ ಹಾಕುತ್ತಿದ್ದನು. ಮಾತಿಗೆ ಮಾತು ಬಂದಾಗ ಲಕ್ಷ್ಮಿ ದೇವಿಯವರು ವಿಮಲೆಯಲ್ಲಿ ಬಹಳ ಪ್ರೀತಿ ವಿಶ್ವಾಸಗಳನ್ನು ಇಟ್ಟಿರುವುದಾಗಿ ಹೇಳುತ್ತಿದ್ದನು. ಕವಿಯು ವಿಮಲೆಯ ಕೌಶಲ್ಯವನ್ನೂ, ಗುಣಗಳನ್ನೂ ಲಕ್ಷ್ಮಿ ದೇವಿಯೊಡನೆ ಬಹಳವಾಗಿ ವರ್ಣಿಸುತ್ತಿದ್ದಾನೆಂದು ಭಟ್ಟನು ವಿಮಲೆಗೆ ಹೇಳಿ ಸಂತೋಷ ಪಡಿಸುತ್ತಿದ್ದನು. ವಿಮಲೆಯ ಮನಸ್ಸಿನ ತೂಗಾಟವು ಒಂದೊಂದು ಬಾರಿ, ಪ್ರಬಲವಾಗಿಯೇ ಇರುತ್ತಿದ್ದಿತು. ಅವಳು ಏಕಾಂತದಲ್ಲಿ ತನ್ನ ವಿಚಾರವನ್ನು ತಾನೇ ಬಹಳ ಯೋಚಿಸುತ್ತಿದ್ದಳು. ಅವಳಿಗೆ ತಾನು ಪ್ರಸಿದ್ಧ ನಟಿಯಾಗಬೇಕೆಂಬ ಆ ಕಾಂಕ್ಷೆಯು ಪ್ರಬಲವಾಗಿದ್ದಿತು. ಈಗ ಆ ಇಷ್ಟಾರ್ಥವು ಪೂರ್ಣಫಲವಾಗಿದೆಯೆಂಬ ನಂಬಿಕೆಯು ಅವಳಿಗಿದ್ದಿತು. ಇನ್ನು ನಾಲ್ಕಾರು ವಾರಗಳಲ್ಲಿ ಚಿತ್ರಪಟದಲ್ಲಿಯೇ ಕಾಣಬಹುದೆಂಬ ಕಲ್ಪನೆಯು ಅವಳಿಗಿದ್ದಿತು. ಇದಕ್ಕೆಲ್ಲಾ ಭಟ್ಟನೇ ಕಾರಣನೆಂದು ಅವಳ ಅಂತರಾತ್ಮದಲ್ಲಿ ಕೃತಜ್ಞತೆಯ ದೀವಿಗೆಯು ಉರಿಯುತ್ತಿದ್ದಿತು. ಭಟ್ಟನ ಪ್ರೀತಿ ವಿಶ್ವಾಸಗಳಲ್ಲಿ ಅವಳಿಗೆ ಎಳ್ಳಷ್ಟೂ ಸಂದೇಹವಿರಲಿಲ್ಲ. ಆದರೆ ತನ್ನ ಮುಂದಿನ ಜೀವನ ಪಥವು ಮಾತ್ರ ಅವಳಿಗೆ ಕಗ್ಗತ್ತಲೆಯ ಗುಹೆಯಾ

ಗಿದ್ದಿತು. ತಾನು ಜೀವನದಲ್ಲಿ ಸ್ವೇಚ್ಛಾಚಾರಿಯಾಗಿರುವುದು ಸರ್ವಥಾ ಅಸಂಭವ. ಭಟ್ಟನ ಪ್ರೇಯಸಿಯಾಗಿರುವುದು ಚಂಚಲ. ಗೃಹಿಣಿಯಾಗುವುದಂತೂ ಅಸಾಧ್ಯ ಈ ಮನಸ್ಸಿನ ತರಂಗಗಳಲ್ಲಿ ಲಕ್ಷ್ಮೀದೇವಿಯು ಅವಳ ಕಣ್ಣು ಮುಂದೆ ಬಂದು ನಿಂತಂತೆ ಆಗುತ್ತಿದ್ದಿತು. ರೂಪಲಾವಣ್ಯ, ಕಲೆ ಗಾಂಭೀರ್ಯಗಳಲ್ಲಿ ಲಕ್ಷ್ಮೀದೇವಿಯನ್ನು ಅನೇಕ ವೇಳೆ ತನಗೆ ಹೋಲಿಸಿಕೊಂಡು ಮನಸ್ಸಿನಲ್ಲಿಯೇ ಸೋಲನ್ನು ಒಪ್ಪಿಕೊಳ್ಳುತ್ತಿದ್ದಳು. ಒಂದು ಬಾರಿ ಭಟ್ಟನೊಡನೆ ಈ ಮಾತನ್ನು ಎತ್ತಬೇಕೆಂದು ವಿಮಲೆಯು ಮನಸ್ಸನ್ನು ಗಟ್ಟಿಮಾಡಿಕೊಳ್ಳುತ್ತಿದ್ದಳು. ಭಟ್ಟನೊಡನೆ ಮಾತನಾಡುವಾಗ ಈ ಮಾತಿನ ಹತ್ತಿರ ಹತ್ತಿರ ಬರುತ್ತಿದ್ದಳು. ಆದರೆ ಪ್ರತ್ಯಕ್ಷವಾಗಿ ಅವಳ ಬಾಯಲ್ಲಿ ಆ ಮಾತುಗಳು ಹೊರಡುತ್ತಿರಲಿಲ್ಲ. ಅವಳ ಮುಖದಲ್ಲಿ ಯಾವುದೋ ಒಂದು ಭಯವು ಮೂಡಿ ಮೌನ ಮುದ್ರೆಯು ಆವರಿಸುತ್ತಿದ್ದಿತು. ಮನಸ್ಸು ಯಾವುದನ್ನೋ ಆಲೋಚನೆ ಮಾಡುತ್ತಿದ್ದರೆ ಎಲ್ಲಿಗೋ ಹೋಗಿ ನಿಲ್ಲುತ್ತದೆ. ತಾನು ಭಟ್ಟನ ಮನೆಯಲ್ಲಿರುವಂತಾಗಬೇಕು. ಲಕ್ಷ್ಮಿಯು ತನ್ನ ಮೇಲೆ ಅನುಗ್ರಹಿಸಬೇಕು. ಮದುವೆಯೆಂಬ ಶಾಸ್ತ್ರವಿಲ್ಲದಿದ್ದರೂ ಚಿಂತೆಯಿಲ್ಲ. ತಾನು ಭಟ್ಟನನ್ನೂ ಲಕ್ಷ್ಮೀದೇವಿಯನ್ನೂ ಸಮಸಮವಾಗಿ ಆರಾಧಿಸಿ ಇಬ್ಬರ ಪ್ರೀತಿಗೂ ಪಾತ್ರಳಾಗಬೇಕು. ಹೀಗೆ ಅವಳು ತನ್ನ ಭವಿಷ್ಯದ ಚಿತ್ರವನ್ನು ಚಿತ್ರಿಸಿಕೊಳ್ಳುತ್ತಿದ್ದಳು. ಅದಕ್ಕೆ ಲಕ್ಷ್ಮೀದೇವಿಯ ಪೂರ್ಣಾನುಗ್ರಹವು ಬೇಕು. ಅದನ್ನು ಸಂಪಾದಿಸಬಲ್ಲೆನೆಂಬ ಧೈರ್ಯವು ವಿಮಲೆಗೆ ಬರುತ್ತಿದ್ದಿತು. ಆಗ ಅವಳ ಮನಸ್ಸಿನ ಭಯ, ಅಂಧಕಾರಗಳೆಲ್ಲವೂ ತೊಲಗಿ ವಿಮಲೆಯ ಮನಸ್ಸು ಪ್ರಸನ್ನವಾಗುತ್ತಿದ್ದಿತು.

ಸಮಾರಂಭದ ದಿನವು ಬಂದಿತು. ಕಂಪನಿಯ ನಟ–ನಟಿಯರೆಲ್ಲರಲ್ಲೂ ಉತ್ಸಾಹವು ತುಂಬಿ ತುಳುಕುತ್ತಿದ್ದಿತು. ವಿಜಯನು ಆ ದಿನ ವಿಮಲಾದೇವಿಯ ಸಂಗೀತವನ್ನು ಇಟ್ಟಿದ್ದನು. ಸ್ನೇಹಲತಾದೇವಿಯ ನರ್ತನವನ್ನು ಏರ್ಪಡಿಸಿದ್ದನು. ಮನೆಯಲ್ಲಿ ಉಪಾಹಾರದ ಏರ್ಪಾಡುಗಳಾಗಿದ್ದವು. ಮಾಧವಾಶ್ರಮದವರು ಎಲ್ಲ ವ್ಯವಸ್ಥೆಯನ್ನೂ ಒಪ್ಪಿಕೊಂಡಿದ್ದರು. ಟೇಕಾರಾಂನು

"ಮಾಧವಾಶ್ರಮ"ದಲ್ಲಿಯೇ ಬಿಡಾರವನ್ನು ಇಟ್ಟುಕೊಂಡಿದ್ದನು. ಆ ಏರ್ಪಾಡುಗಳೆಲ್ಲವೂ ಅವನಿಗೆ ಸೇರಿದ್ದವು. ಕಂಪನಿಯವರಲ್ಲದೇ ಅತಿಥಿಗಳು ಯಾರಿಗೂ ಆಹ್ವಾನವನ್ನು ಕೊಟ್ಟಿರಲಿಲ್ಲ. ಪ್ರಸಿದ್ಧರಾದ ಐದಾರು ಮಂದಿ ನಟಿಯರಿಗೆ ಮಾತ್ರ ಉಪಚಾರದ ಆಹ್ವಾನವಿತ್ತು. ಪ್ರಭುರಾಜ್ ದಂಪತಿಗಳು ಮುಖ್ಯ ಅತಿಥಿಗಳಾಗಿ ಬರುತ್ತಾರೆಂಬ ವಿಷಯವು ಎಲ್ಲರಿಗೂ ತಿಳಿದಿತ್ತು.

ಮಧ್ಯಾಹ್ನ ನಾಲ್ಕು ಗಂಟೆಗೆ ಕಂಪನಿಯ ನಟನಟಿಯರು, ಸಂಗೀತಗಾರರು ನಾಟಕವನ್ನು ಕಲಿಸುವ ವಿದ್ವಾಂಸರು, ಫೋಟೋಗ್ರಾಫರುಗಳು, ಬಂದು ಲಕ್ಷ್ಮೀನಿವಾಸದಲ್ಲಿ ಸೇರಿದ್ದರು. ಗೊಡ್ಬೋಲೆ, ಟೇಕಾರಾಂ, ಅವರಿಬ್ಬರೂ ಎಲ್ಲರನ್ನೂ ಆದರದಿಂದ ಸ್ವಾಗತಿಸಿ ಕುಳ್ಳಿರಿಸುತ್ತಿದ್ದರು. ವಿಮಲೆಯು ಕಾಲಕ್ಕೆ ಸರಿಯಾಗಿ ಬಂದಳು. ಅವಳು ಸಾಧಾರಣವಾಗಿ ಅಲಂಕರಿಸಿಕೊಂಡು ಬಂದಿದ್ದಳು. ಅವಳ ಅಲಂಕಾರವು ಪ್ರಕಾಶಮಾನವಾಗಿ ಎದ್ದು ಕಾಣುತ್ತಿದ್ದಿತು. ಇವಳೇ ಮುಖ್ಯ ನಟಿಯೆಂದು ತೋರ್ಪಡಿಸಿಕೊಳ್ಳುವ ಮಟ್ಟಿಗೆ ಇದ್ದಿತು. ಅವಳು ಕಾರಿನಿಂದ ಇಳಿಯುತ್ತಲೇ ಟೇಕಾರಾಂನು ಒಳಗೆ ಕರೆದೊಯ್ದನು. ವಿಮಲೆಯು ಎಲ್ಲರನ್ನೂ ಅಭಿವಂದಿಸಿ ಮಹಡಿಯ ಮೇಲಕ್ಕೆ ಹೋದಳು. ಅಲ್ಲಿ ಭಟ್ಟನೊಡನೆ ಕುಳಿತಿದ್ದ ಲಕ್ಷ್ಮೀದೇವಿಯನ್ನು ಅಭಿವಂದಿಸಿದಳು. ಭಟ್ಟನಿಗೆ ಕೈ ಮುಗಿದಳು. ಲಕ್ಷ್ಮಿಯು ಆಸನದಿಂದ ಎದ್ದು ಆದರದಿಂದ ವಿಮಲಾದೇವಿಯನ್ನು ತನ್ನ ಪಕ್ಕದಲ್ಲಿ ಕುಳ್ಳಿರಿಸಿಕೊಂಡು ಯಥೋಚಿತವಾಗಿ ಕುಶಲಪ್ರಶ್ನೆಗಳನ್ನು ಮಾಡಿದಳು. ಅವಳ ನಾಟಕಾಭ್ಯಾಸವು ಯಶಸ್ವಿಯಾಗಿದೆಯೆಂದು ಕವಿರಾಜನು ಹೇಳುತ್ತಾನೆಂದು ಹೇಳಿದಳು. ಕವಿರಾಜನು ಕೆಳಗಿನ ಅಂತಸ್ತಿನಲ್ಲಿಯೇ ಇದ್ದು ಹೊರಗಿನವರಾದ ಸಂಗೀತವಿದ್ವಾಂಸರನ್ನೂ ಒಬ್ಬಿಬ್ಬರು ಟೇಕಾರಾಂನ ಸ್ನೇಹಿತರುಗಳಾದ ಪತ್ರಿಕೋದ್ಯೋಗಿಗಳನ್ನೂ ಮಾತನಾಡಿಸುತ್ತಿದ್ದನು. ಆ ಸಮಯದಲ್ಲಿ, ರಂಜನಿ, ಸ್ನೇಹಪ್ರಭಾ, ನಾಸೀಂ, ನಿಗಾರ್, ಸೂರಯ್ಯ, ದೇವಾನುದ್, ಮೆಹ್ತಾಬ್, ಸೊಹರಾಬ್‌ಮೋದಿ ಇವರೆಲ್ಲರೂ ಬೇರೆ ಬೇರೆ ಕಾರುಗಳಲ್ಲಿ ಬಂದರು. ಟೇಕಾರಾಂನು ಒಬ್ಬೊಬ್ಬರನ್ನಾಗಿ ಸ್ವಾಗತಿಸಿ ಮನೆಯೊಳಗೆ ಕರೆತಂದು, ಕವಿಗೆ ಪರಿಚಯ ಮಾಡಿಸಿದನು. ಕವಿಯು ಅವರೆಲ್ಲರನ್ನೂ

ಸರಳ ಭಾವದಿಂದ ಸ್ವಾಗತಿಸಿ ಆಸನದಲ್ಲಿ ಕುಳ್ಳಿರಿಸಿದನು. ಈ ಸಮಯಕ್ಕೆ ಸರಿಯಾಗಿ ಭಟ್ಟನು ಕೆಳಗಿಳಿದು ಬಂದು ಪ್ರತ್ಯೇಕವಾಗಿ ಎಲ್ಲರ ಸಮೀಪಕ್ಕೂ ಹೋಗಿ ಅಭಿನಂದಿಸಿದನು. ಲಕ್ಷ್ಮಿಯೂ ವಿಮಲೆಯೂ ಕೆಳಗಿಳಿದು ಬಂದರು. ವಿಮಲೆಯು ಅಲ್ಲಿಗೆ ಬಂದಿದ್ದ ನಟಿಯರನ್ನೆಲ್ಲಾ ಮಾತನಾಡಿಸಿದಳು. ಲಕ್ಷ್ಮೀದೇವಿಯು ಗಾಂಭೀರ್ಯದಿಂದ ದೂರವಾಗಿ ನಿಂತಿದ್ದಳು. ಪ್ರಭುರಾಜನ ಕಾರು ಬಂದಿತು. ಭಟ್ಟನು ಸ್ವಾಗತಿಸಲು ಹೋದನು. ರೇವಾದೇವಿಯೊಬ್ಬಳೇ ಕಾರಿನಿಂದ ಇಳಿದಳು. ಭಟ್ಟನು ಕಾರಿನ ಸಮೀಪಕ್ಕೆ ಹೋಗಿ ರೇವಾದೇವಿಯನ್ನು ವಂದಿಸಿದನು. "ಪ್ರಭುರಾಜರು ಬರಲಿಲ್ಲವೇ ?" ಎಂದು ಕೇಳಿದನು. ರೇವಾದೇವಿಯು " ಇಲ್ಲ. ಅವರ ಮಾತೂಶ್ರೀಯವರಿಗೆ ಬಹಳ ದೇಹಾಲಸ್ಯವಾಗಿದೆ. ಅವರು ಪುಣೆಯಲ್ಲಿದ್ದಾರೆ. ಸೇಟ್‌ರವರು ಈ ದಿನ ಪ್ರಾತಃಕಾಲ ಅಲ್ಲಿಗೆ ಹೋಗಿದ್ದಾರೆ. ನಿಮ್ಮ ಕ್ಷಮಾ ಪ್ರಾರ್ಥನೆ ಮಾಡಬೇಕೆಂದು ಹೇಳಿದ್ದಾರೆ " ಎಂದಳು. ಭಟ್ಟನು ರೇವಾದೇವಿಯನ್ನು ಮನೆಯೊಳಗೆ ಕರೆತಂದನು. ಅಲ್ಲಿದ್ದ ಅನೇಕರ ಬಾಯಿಯಲ್ಲಿ " ರೇವಾದೇವಿ-ರೇವಾದೇವಿ " ಎಂಬ ಮಾತು ಹೊರಟಿತು. ರೇವಾದೇವಿಯು ಲಕ್ಷ್ಮಿದೇವಿಯನ್ನು ನೋಡಿ ವಂದಿಸಿದಳು. ಲಕ್ಷ್ಮಿಯು ಆದರದಿಂದ ರೇವಾದೇವಿಯನ್ನು ಒಂದು ಸೋಫಾದ ಮೇಲೆಕುಳ್ಳಿರಿಸಿದಳು. ವಿಮಲಾದೇವಿಯೂ ಬಂದು ರೇವಾದೇವಿಗೆ ವಂದಿಸಿದಳು.

ಲಕ್ಷ್ಮಿಯು "ರೇವಾದೇವಿ, ಇವರೇ ಈ ಚಿತ್ರದಲ್ಲಿ ಮುಖ್ಯ ನಟಿ "ವಿಮಲಾದೇವಿ. ಕುಲೀನರ ಹೆಣ್ಣು, ವಿದ್ಯಾವತಿ. ಈಕೆಯ ಸಂಗೀತದ ಪ್ರತಿಭೆಯನ್ನು ಇಂದು ಕಾಣುವಿರಿ " ಎಂದು ಹೇಳಿದಳು

ರೇವಾ ಕೈ ಮುಗಿದು ಪ್ರಸನ್ನತೆಯನ್ನು ವ್ಯಕ್ತಪಡಿಸಿದಳು.

ಆರ್ಕೆಸ್ಟ್ರಾ ಧ್ವನಿ ಮಾಡಲಾರಂಭಿಸಿತು. ಎಲ್ಲ ವಾದ್ಯಗಳೂ ಒಂದುಗೂಡಿ ಆ ಮನೆಯಲ್ಲೆಲ್ಲಾ ಧ್ವನಿ ಮಾಡುತ್ತಿದ್ದವು. ಮೈಸೂರು ಸುಗಂಧ ಬತ್ತಿಯ ಘಮಘಮ ವಾಸನೆಯನ್ನು ಫ್ಯಾನುಗಳು ಎಲ್ಲ ಕಡೆಗೂ ಹರಡುತ್ತಿದ್ದವು. ಎಲ್ಲ ಮೇಜುಗಳ ಮೇಲೆಯೂ ಪುಷ್ಪದಾನುಗಳು ಇಡಲ್ಪಟ್ಟು ಪುಷ್ಪ ಸೌರಭವು ಮಿಸುಗುತ್ತಿದ್ದಿತು. ಫಲಹಾರದ ತಟ್ಟೆಗಳು ಎಲ್ಲ ಮೇಜಿನ ಮೇಲೆಯೂ ಇಡಲ್ಪಟ್ಟವು. ಭಟ್ಟನೂ, ಕವಿಯೂ, ಟೀಕಾ

ರಾಮನೂ ಎಲ್ಲರನ್ನೂ ಉಪಚರಿಸಿ ಫಲಹಾರ ಸ್ವೀಕರಿಸಬೇಕೆಂದು ಪ್ರಾರ್ಥನೆ ಮಾಡುತ್ತಿದ್ದರು. ತಟ್ಟೆಗಳಲ್ಲಿ ಉತ್ತಮವಾದ ಮಿಠಾಯಿಗಳು, ಹಲ್ವ, ಹಣ್ಣಿನ ಹೋಳುಗಳು ಇದ್ದವು. ಹಣ್ಣುಗಳ ರಸದಿಂದ ತುಂಬಿದ ಲೋಟಾಗಳು ಎಲ್ಲ ಮೇಜುಗಳ ಮೇಲೆಯೂ ಇಡಲ್ಪಟ್ಟಿದ್ದವು. ರೇವಾದೇವಿಯೂ ಲಕ್ಷ್ಮೀದೇವಿಯೂ ಬಂದು ಸೋಫಾದ ಮೇಲೆ ಕುಳಿತಿದ್ದರು. ಅವರ ಮುಂದೆಯೂ ಸಣ್ಣ ಮೇಜವನ್ನಿಟ್ಟು ಫಲಹಾರದ ತಟ್ಟೆಗಳನ್ನು ತಂದಿಟ್ಟರು. ಭಟ್ಟನು ರೇವಾದೇವಿಯು ಸುಮ್ಮನೆ ಮಾತನಾಡುತ್ತಾ ಕುಳಿತಿರುವುದನ್ನು ನೋಡಿ, ಆಕೆಯ ಸಮೀಪಕ್ಕೆ ಬಂದು ಫಲಹಾರ ಸ್ವೀಕರಿಸಬೇಕೆಂದು ವಿನಯದಿಂದ ಉಪಚಾರೋಕ್ತಿಗಳನ್ನು ಹೇಳಿದನು. ರೇವಾದೇವಿಯು ಸಂಕೋಚದಿಂದ ಹಣ್ಣಿನ ಚೂರುಗಳನ್ನು ಬಾಯಿಯಲ್ಲಿ ಹಾಕಿಕೊಂಡಳು. ವಿಮಲಾದೇವಿಯು ರಂಜಿನಿ, ನಜೀಂ, ಸ್ನೇಹಪ್ರಭಾ ಮುಂತಾದ ನಟಿಯರ ಮೇಜಿನ ಹತ್ತಿರ ಕುಳಿತುಕೊಂಡು ಅವರಿಗೆ ಉಪಚಾರೋಕ್ತಿಗಳನ್ನು ಹೇಳುತ್ತಿದ್ದಳು. ವಾದ್ಯಗಳ ವಾದನವು ಒಂದು ಕಡೆಯಿಂದ ನಡೆಯುತ್ತಲೇ ಇದ್ದಿತು. ಅಟೆಂಡರುಗಳು ಎಲ್ಲ ಮೇಜುಗಳಿಗೂ ಚಹಾ ಬಟ್ಟಲುಗಳನ್ನು ತಂದಿಟ್ಟರು.

ರೇವಾದೇವಿಯು ಚಹಾ ತೆಗೆದುಕೊಳ್ಳುತ್ತಾ ಲಕ್ಷ್ಮೀದೇವಿಯನ್ನು ಕುರಿತು "ಇದೆಲ್ಲಾ ನಿಮ್ಮ ಹೆಸರಿನಲ್ಲಿ ನಡೆಯುತ್ತಿದೆ. ನೀವು ಹೋಗಿ ಆ ಅಥಿತಿಗಳಿಗೆ ಉಪಚಾರ ಹೇಳಬೇಡವೆ? ನನ್ನ ಉಪಚಾರದಲ್ಲಿಯೇ ಕುಳಿತು ಬಿಟ್ಟಿದ್ದೀರಲ್ಲಾ" ಎಂದು ಹೇಳಿದಳು.

ಲಕ್ಷ್ಮೀದೇವಿಯು ನಗುತ್ತಾ "ನನಗೆ ಇವರುಗಳೊಡನೆ ಕಲೆತು ಮಾತನಾಡಿ ಅಭ್ಯಾಸವಿಲ್ಲ. ಯಾವ ಮಾತುಗಳು ಅವರಿಗೆ ರುಚಿಸುತ್ತವೆಯೋ ಅದನ್ನು ನಾನರಿಯೆ. ಆ ನಟಿಯರೆಲ್ಲಾ ಚತುರೆಯರು. ಪ್ರವೀಣೆಯರು. ನನ್ನನ್ನು ಪೆಚ್ಚು ಎಂದುಕೊಳ್ಳಬಹುದು. ಆದ್ದರಿಂದ ನಿಮ್ಮೊಡನೆ ಕುಳಿತಿರುವುದೇ ಗಂಭೀರವೆಂದುಕೊಂಡಿದ್ದೇನೆ" ಎಂದು ಹೇಳಿದಳು.

ರೇವಾದೇವಿಯು ನಗುತ್ತಾ "ಅವರಿಗೆ ನಮ್ಮಗಳೊಡನೆ ಮಾತನಾಡುವುದು ಸ್ವಾರಸ್ಯವಾಗುವುದಿಲ್ಲ. ಅವರ ನಾಟಕದ ಜಾತಿಯ ಮಾತುಗಳನ್ನೇ ಆಡಬೇಕು. ಅದು ಗಂಡಸರಿಗೆ ಒಪ್ಪಬಹುದು" ಎಂದಳು.

ಲಕ್ಷ್ಮಿಗೆ ಸಮಾಧಾನವಾಯಿತು. ಏಕೆಂದರೆ ತಮ್ಮಿಬ್ಬರ ಮನಸ್ಸುಗಳು ಒಂದೇ ರೀತಿಯಾಗಿವೆ ಎಂದುಕೊಂಡಳು.

ಫಲಹಾರವು ಪೂರೈಸಿದ ಮೇಲೆ ಎಲ್ಲರೂ ಮಹಡಿಯ ಮೇಲಕ್ಕೆ ಹೋದರು. ಅಲ್ಲಿ ಕವಿಯೂ ಟೇಕಾರಾಮನೂ ಎಲ್ಲರನ್ನೂ ಕೂಡಿಸಿದರು. ಎಲ್ಲರಿಗೂ ಹಿಂದುಗಡೆ ಸೋಫಾದಮೇಲೆ ಲಕ್ಷ್ಮಿಯೂ ರೇವಾದೇವಿಯೂ ಕುಳಿತಿದ್ದರು. ವಿಮಲಾದೇವಿಯ ಹಾಡಿಕೆಗೆ ಸದರು ಸಿದ್ಧವಾಗಿದ್ದಿತು. ಕಾಶಿನಾಥ ಬಾವಾ ತಬಲವನ್ನಿಟ್ಟುಕೊಂಡು ಕುಳಿತನು. ಮೈಸೂರಿನ ರಾಮಣ್ಣನ ಪಿಟೀಲು. ಈ ಸದರಿಗೆ ಮೇಲುಗಡೆ " ಲಕ್ಷ್ಮಿ ಪಿಕ್ಚರ್ಸ್ " ಎಂಬ ಚಿನ್ನದ ಅಕ್ಷರಗಳನ್ನು ಕೆತ್ತಿದ ಬೋರ್ಡ್ ತೂಗುಹಾಕಲ್ಪಟ್ಟಿದ್ದಿತು. ವಿಮಲಾದೇವಿಯು ಬಂದು ಎಲ್ಲರಿಗೂ ವಂದಿಸಿ ಕುಳಿತುಕೊಂಡಳು. ಕಾಶಿನಾಥಬಾವಾ ತಂಬೂರಿಯನ್ನೆತ್ತಿ ಅವಳ ಕೈಗೆ ಶೃತಿ ಮಾಡಿಕೊಟ್ಟನು. ಟೇಕಾರಾಮನು ಮುಂದೆ ಬಂದು ನಿಂತು ಪುಟ್ಟ ಭಾಷಣ ಮಾಡಿದನು.

ಅವನು ಶಿವಪಾರ್ವತೀ ಚಿತ್ರದ ಛಾಯೆಯನ್ನು ಹೇಳಿ "ನಾಳಿನಿಂದ ಷೂಟಿಂಗ್ ಆರಂಭವಾಗುತ್ತದೆ. ಇಲ್ಲಿ ಇಂಡಿಯಾ ದೇಶದ ಸುಪ್ರಸಿದ್ಧ ನಟ ನಟಿಯರು ನಮ್ಮ ಆಹ್ವಾನವನ್ನು ಮನ್ನಿಸಿ ಬಂದಿದ್ದೀರಿ. ಸುಪ್ರಸಿದ್ಧರಾದ ಮೋದಿ ದಂಪತಿಗಳು ದಯಮಾಡಿಸಿದ್ದೀರಿ. ನಿಮ್ಮೆಲ್ಲರ ಸಹಕಾರ ಆಶೀರ್ವಾದಗಳು ನಮಗಿರಬೇಕು. ನಮ್ಮ ನಟ ನಟಿಯರು ಹೊಸಬರು. ನನ್ನ ಪರಿಚಯ—ಸ್ನೇಹಗಳು ತಮ್ಮೆಲ್ಲರಿಗೂ ಇದ್ದರೂ ನಾನು ಹೊಸ ಡೈರೆಕ್ಟರ್. ತಮ್ಮೆಲ್ಲರ ಸಹಾಯ ಸಹಾನುಭೂತಿಗಳು ಬೇಕು " ಎಂದು ಪ್ರಾರ್ಥನೆ ಮಾಡಿದನು.

ಎಲ್ಲರೂ ಚಪಾಳೆ ತಟ್ಟಿದರು. ಮೋದಿಯವರೆದ್ದು ಹೇಳಿದರು. " ಟೇಕಾರಾಂ, ಭಟ್, ಮತ್ತು ವಿಜಯೇಂದ್ರರಾಯರೇ. ನಿಮ್ಮ ಉದ್ಯಮವು ಹೊಸದು. ಆದರೆ ನೀವೆಲ್ಲರೂ ನಮಗೆ ಸ್ನೇಹಿತರಾಗಿದ್ದೀರಿ. ಚಿತ್ರಪಟವು ನಿಮ್ಮದಾದರೂ ಕಲೆಯು ನಮ್ಮದು. ನಾವು ಯಾವಾಗಲೂ ನಿಮ್ಮ ಸಹಾಯಕ್ಕೆ ಸಿದ್ಧರಾಗಿದ್ದೇವೆ. ಲಕ್ಷ್ಮಿ ಪಿಕ್ಚರ್ಸ್ ಯಶಸ್ವಿಯಾಗಲಿ. ಶ್ರೀಮತಿ ರಂಜನಿ, ಶ್ರೀ ನಜೀಂ, ನಾನೂ ಸಹ ನಿಮ್ಮ ಮುಂದಿನ ಚಿತ್ರಗಳಲ್ಲಿ ಪಾತ್ರ ವಹಿಸಲು ಸಿದ್ಧರಾಗಿದ್ದೇವೆ. ಟೇಕಾರಾಮರು ಮಾತ್ರ ಎಂದೆಂದಿಗೂ ಹೊಸ

ಬರಲ್ಲ. ಅವರು ನಕ್ಷತ್ರಿಕನಂತೆ ನಮ್ಮನ್ನೆಲ್ಲಾ ಪೀಡಿಸುತ್ತಿದ್ದರು. ಈಗ ಅವರೂ ನಮ್ಮ ದಾರಿಗೆ ಬಂದರು. ಅವರ ಭಯವು ನಮಗೆ ತಪ್ಪಿತು" ಎಂದು ಹೇಳಿದರು.

ಎಲ್ಲರೂ ನಗುತ್ತಾ ದೀರ್ಘಕಾಲ ಚಪ್ಪಾಳೆ ತಟ್ಟಿದರು.

ವಿಮಲಾದೇವಿಯ ಸಂಗೀತವು ಆರಂಭವಾಯಿತು. ಅವಳು ನಾಟಕದ ಸಂಗೀತವನ್ನು ಹಾಡಲಿಲ್ಲ. ಶಾಸ್ತ್ರೀಯವಾದ ಸಂಗೀತವನ್ನು ಹಾಡಿದಳು. ಅವಳ ಕಂಠದ ಮಾಧುರ್ಯ, ಸಂಗೀತದ ಸೌರಭಗಳನ್ನು ಕಂಡು ಎಲ್ಲರೂ ಆನಂದಿಸಿದರು. ಪ್ರಸಿದ್ಧ ನಟಿಯರು ಎದ್ದು ಬಂದು ವಿಮಲೆಯನ್ನು ಆಲಂಗಿಸಿದರು. ವಿಮಲೆಯು ಎದ್ದು ಹೋಗಿ ಲಕ್ಷ್ಮಿ, ರೇವಾದೇವಿಯವರಿಗೆ ವಂದಿಸಿ, ನಟಿಯರ ಮಧ್ಯದಲ್ಲಿ ಕುಳಿತಳು.

ಹಜಾರವೆಲ್ಲಾ ಕತ್ತಲಾಯಿತು. ಸದರಿನ ಮೇಲೆ ವರ್ಣ ದೀಪಗಳನ್ನು ಬಿದ್ದವು. ಸ್ನೇಹಲತಾ ಸದರಿಗೆ ಬಂದು ಮೇನಕೆಯ ನೃತ್ಯವನ್ನು ನರ್ತನ ಮಾಡಿದಳು. ತಾಳಮೇಳಗಳು ಹಿಂದೆ ಮಿಡಿಯುತ್ತಿದ್ದವು. ಎಲ್ಲರೂ ಚಪ್ಪಾಳೆ ತಟ್ಟಿ ಆನಂದವನ್ನು ಸೂಚಿಸಿದರು. ಸ್ನೇಹಲತಾ ಎಲ್ಲರಿಗೂ ವಂದಿಸಿ ವೇಷವನ್ನು ಬದಲಾಯಿಸಲು ಕೋಣೆಯೊಳಗೆ ಹೊರಟು ಹೋದಳು.

ಆರ್ಕೆಸ್ಟ್ರಾದಲ್ಲಿ ಮಂಗಳ ಧ್ವನಿಯಾಯಿತು. ಎಲ್ಲರೂ ಎದ್ದು ಹೊರಡಲು ಅನುವಾದರು. ಲಕ್ಷ್ಮಿದೇವಿಯು ಎದ್ದು ಒಂದೆರಡು ಹೆಜ್ಜೆಗಳನ್ನು ಮುಂದಿಟ್ಟು ತಲೆ ಬಾಗಿ ಎಲ್ಲರನ್ನೂ ಅಭಿನಂದಿಸಿದಳು. ನಟನಟಿಯರು ಭಟ್ಟನಿಗೂ, ಕವಿಗೂ ಅಭಿವಂದಿಸಿ ಹೊರಟರು. ವಿಮಲಾದೇವಿಯು ಅವರೆಲ್ಲರನ್ನೂ ಸಾಗಕಳುಹಿಸಿದಳು. ಕಂಪನಿಯವರೆಲ್ಲರೂ ಅಪ್ಪಣೆಯನ್ನು ಬೇಡಿ ಹೊರಟು ಹೋದರು.

ಆ ಮಹಡಿಯ ಮೇಲೆ ರೇವಾದೇವಿಯೂ ಲಕ್ಷ್ಮಿಯೂ ಇಬ್ಬರೇ ಇದ್ದರು. ಭಟ್ಟನು ಬಂದು ನಿಂತುಕೊಂಡನು. ಕವಿಯು ಎಲ್ಲರನ್ನೂ ಸಾಗಕಳುಹಿಸಲು ಕೆಳಗೆ ಹೋಗಿದ್ದರು.

ರೇವಾ "ಭಟ್ಟರೇ, ನಿಮ್ಮ ಸಮಾರಂಭವು ಸೊಗಸಾಗಿ ನಡೆಯಿತು. ಈ ಊರಿನಲ್ಲಿ ನಾನೆಷ್ಟೋ ಸಮಾರಂಭಗಳನ್ನು ನೋಡಿದ್ದೇನೆ. ಇಷ್ಟು

ಸೊಗಸಾದ ಸಮಾರಂಭದಲ್ಲಿ ಎಂದೂ ಭಾಗವಹಿಸಲಿಲ್ಲ. ನಿಮ್ಮ ಸೇಟರು ಇಲ್ಲಿ ಇದ್ದಿದ್ದರೆ ಬಹಳ ಸಂತೋಷ ಪಡುತ್ತಿದ್ದರು " ಎಂದು ಹೇಳಿದಳು.

ಭಟ್ಟನು " ಬಹಳ ಸಂತೋಷ. ಇದೆಲ್ಲಾ ಲಕ್ಷ್ಮೀದೇವಿಯವರು ಏರ್ಪಡಿಸಿದ ಔತಣ. ಆದರೆ ಅವರು ಹಸೆಯ ಮೇಲೆ ಕುಳಿತಂತೆ ನಿನ್ನೊಡನೆ ಕುಳಿತುಬಿಟ್ಟಿದ್ದರು " ಎಂದು ಹೇಳಿದಳು.

ಲಕ್ಷ್ಮಿಯು " ರೇವಾದೇವಿಯು ನಮ್ಮ ಮುಖ್ಯ ಅತಿಥಿಗಳಷ್ಟೆ. ಅವರನ್ನು ನಾನು ಸರಿಯಾಗಿ ನೋಡಿಕೊಂಡಿದ್ದೇನೆ. ಉಳಿದವರ ಉಪಚಾರವೆಲ್ಲವೂ ನಿಮ್ಮ ಪಾಲು " ಎಂದು ಹೇಳಿದಳು.

ರೇವಾದೇವಿಯು ನಕ್ಕಳು.

ಅಷ್ಟು ಹೊತ್ತಿಗೆ ಕವಿಯೂ ವಿಮಲಾದೇವಿಯೂ ಮಹಡಿಯ ಮೇಲಕ್ಕೆ ಬಂದರು.

ರೇವಾ ವಿಮಲೆಯ ಸಂಗೀತವನ್ನು ಪ್ರಶಂಸಿಸಿದಳು. " ಒಂದು ದಿನ ನಮ್ಮ ಮನೆಗೆ ಬನ್ನಿ " ಎಂದು ಆಹ್ವಾನವಿತ್ತಳು.

ಲಕ್ಷ್ಮಿದೇವಿಗೂ ತಮ್ಮ ಮನೆಗೆ ಬರಬೇಕೆಂದು ಬಲವಂತದ ಆಹ್ವಾನವಿತ್ತಳು.

ಲಕ್ಷ್ಮಿಯು " ಇಷ್ಟು ಉಪಚಾರವೇಕೆ ? ರೇವಾದೇವಿ. ನಾನು ನಿಮ್ಮ ಮನೆಗೆ ಬರುತ್ತೇನೆ. ನೀವಲ್ಲದೇ ಈ ಊರಿನಲ್ಲಿ ನನಗೆ ಬೇರೆ ಸ್ನೇಹಿತರಾರಿದ್ದಾರೆ ?" ಎಂದು ಹೇಳಿದಳು.

ರೇವಾ ಹೇಳಿದಳು " ಲಕ್ಷ್ಮಿದೇವಿ. ನಾವುಗಳು ಬಂದು ಹೋಗುವುದೆಲ್ಲಾ ಉಪಚಾರಗಳಾಗಿಬಿಟ್ಟಿದೆ. ಈ ಗಂಡಸರ ತಂಟೆ ಬೇಡ. ನೀವೊಬ್ಬರೇ ನಮ್ಮ ಮನೆಗೆ ಬನ್ನಿರಿ. ಒಂದೆರಡು ದಿವಸಗಳಿದ್ದು ಬರಬೇಕು. ಅದೇ ಸ್ನೇಹದ ಸೌಖ್ಯ " ಎಂದು ಹೇಳಿದಳು.

ಲಕ್ಷ್ಮಿಯು ಭಟ್ಟನ ಮುಖವನ್ನು ನೋಡಿದನು.

ಭಟ್ಟನು " ರೇವಾ ದೇವಿ. ನೀವು ಹಾಗೆಯೇ ಮಾಡಬಹುದು. ನನಗೆ ಈಗ ತಿಳಿಯಿತು. ನಾವು ಅಷ್ಟು ಬೇಡದವರೆಂದು ನನಗೆ ತಿಳಿದಿರಲಿಲ್ಲ. ಇಂದೇ ನೀವು ಲಕ್ಷ್ಮಿದೇವಿಯನ್ನು ಕರೆದುಕೊಂಡು ಹೋಗಿರಿ. ಎರಡೇಕೆ ? ನಾಲ್ಕು ದಿನಗಳು ನಿಮ್ಮ ಮನೆಯಲ್ಲಿಟ್ಟುಕೊಂಡು ಕಳಿಸಿಕೊಡಿರಿ" ಎಂದನು.

ರೇವಾ ಎಲ್ಲರ ಅಪ್ಪಣೆಯನ್ನೂ ಪಡೆದು ಹೊರಡಲು ಅನುವಾದಳು. ಭಟ್ಟನು ರೇವಾದೇವಿಯನ್ನು ಕಾರಿನಲ್ಲಿ ಕೂಡಿಸಿದನು.

ರೇವಾದೇವಿಯು “ ರಾತ್ರಿ ಬಹಳ ಹೊತ್ತಾಗಿದೆ. ಯಾರಾದರೂ ಜೊತೆಗೆ ಬಂದರೆ ಒಳ್ಳೆಯದು ” ಎಂದು ಹೇಳಿದಳು.

ಭಟ್ಟನು “ ನಿಜ. ಹೊತ್ತು ಮೀರಿದೆ. ನಮ್ಮ ಕವಿರಾಜನೂ ಬರುತ್ತಾನೆ. ಇವನಿದ್ದರೆ ಹತ್ತು ಜನರಿದ್ದಂತೆ ” ಎಂದು ಹೇಳಿ ಕವಿರಾಜನ ಬೆನ್ನು ತಟ್ಟಿದನು.

ಕವಿಯು “ ಇಲ್ಲ, ಇಲ್ಲ. ನೀನೇ ಹೋಗಿ ಬಾ. ನನಗೆ ಇನ್ನೂ ಸ್ನಾನವಿಲ್ಲ. ಊಟವಿಲ್ಲ ” ಎಂದು ಹೇಳಿದನು.

ಭಟ್ಟನು ಲಕ್ಷ್ಮಿಯ ಮುಖವನ್ನು ನೋಡಿದನು. ರೇವಾದೇವಿಯು ಲಕ್ಷ್ಮಿಯ ಮುಖವನ್ನು ನೋಡಿದಳು.

ಲಕ್ಷ್ಮಿಯು “ ಅದೇ ಸರಿ. ಭಟ್ಟರೇ ಕರೆದುಕೊಂಡು ಹೋಗಿಬಿಟ್ಟರೆ ನಿಮ್ಮ ಯಜಮಾನರಿಗೂ ಸಮಾಧಾನವಾಗುತ್ತದೆ ” ಎಂದಳು.

ಭಟ್ಟನು ಸಂಕೋಚ ಪಡುತ್ತಾ ಕಾರಿನಲ್ಲಿ ಕುಳಿತುಕೊಂಡನು. ಕಾರು ಹೊರಟಿತು.

ವಿಮಲೆಯು ಕವಿರಾಜನನ್ನು “ ನಮ್ಮ ಮನೆಗೆ ಬನ್ನಿ. ನಿಮ್ಮ ಸ್ನಾನ, ಭೋಜನ ಅಲ್ಲಿಯೇ ನಡೆಯಲಿ. ಟೇಕಾರಾಮರೂ ಬರುತ್ತಾರೆ” ಎಂದು ಹೇಳಿದಳು.

ಕವಿಯು ಒಪ್ಪಿದನು. ಕವಿಯೂ ಟೇಕಾರಾಂನೂ ವಿಮಲೆಯ ಜೊತೆಯಲ್ಲಿ ಹೊರಟು ಹೋದರು.

ಲಕ್ಷ್ಮಿಯು ಮಹಡಿಯ ಮೇಲೆ ಹೋಗಿ ಆಸನದಲ್ಲಿ ಕುಳಿತುಕೊಂಡಳು “ ಇದೇನು ನಾನೊಬ್ಬಳೇ ಇದ್ದೇನೆ ? ಭಟ್ಟರನ್ನೇಕೆ ಕಳುಹಿಸಿಬಿಟ್ಟೆ ? ಒಬ್ಬಂಟಿಕಳಾಗಿ ಈ ಮನೆಯಲ್ಲಿರುವುದು ಕಷ್ಟವೆಂದು ನನಗೆ ತೋರಲೇ ಇಲ್ಲ. ಆ ರೇವಾದೇವಿಯನ್ನು ತಾನೇ ಏಕಾಕಿನಿಯಾಗಿ ಹೇಗೆ ಕಳುಹಿಸುವುದು ? ಅಷ್ಟೊಂದು ಆಭರಣಗಳನ್ನು ಧರಿಸಿಕೊಂಡು ಬಂದಿದ್ದಾಳೆ. ಏನಾದರೂ

ಅಚಾತುರ್ಯವು ಘಟಿಸಿದರೆ ನಮಗೆ ಎಂತಹ ಅಪಕ್ಕ್ಯಾತಿ ? ಭಟ್ಟನು ಜೊತೆಯಲ್ಲಿ ಹೋದುದೆ ಸರಿ—ಎಂದು ಸಮಾಧಾನ ಮಾಡಿಕೊಂಡಳು.

ಹಾಗೆಯೇ ಒಬ್ಬೊಬ್ಬ ನಟಿಯ ಸ್ಮರಣೆಯೂ ಅವಳಿಗೆ ಬಂದಿತು. ಅವರ ಹಾವಭಾವಗಳು ನೆನಪಿಗೆ ಬಂದವು. ಇದೇನು ? ಇವರೆಲ್ಲರೂ ಎಂತಹ ಹೆಂಗಸರು ? ಈ ಹೆಣ್ಣು ಜನ್ಮಗಳು ಹೇಗೆ ಪಾರಾಗಬೇಕು ? ಪ್ರದರ್ಶನ—ಪ್ರದರ್ಶನ. ಇದೇ ಹೊರತು ಬೇರೊಂದು ಕಲ್ಪನೆಯೇ ಅವರಿಗಿಲ್ಲ. ವಿಮಲಾದೇವೀಯೇನು ? ನೋಡುವುದಕ್ಕೆ ಗಂಭೀರವಾಗಿದ್ದಾಳೆ. ಆದರೆ ಅವಳೂ ಈ ನಟಿಯರ ಮನೋಭಾವದವಳೇ ಆಗಿದ್ದಾಳೆ. ಇದೇ ಒಂದು ವಿಚಿತ್ರ ಜಗತ್ತು. ನಮಗೂ ಇದಕ್ಕೂ ಸಂಬಂಧವೇ ಇಲ್ಲ. ಇದ್ದರೂ ತಾವರೆ ಎಲೆಯ ಮೇಲಿನ ನೀರಿನಂತೆ. ನನ್ನ ಸ್ವಾಮಿಯು ಮಾತ್ರ ಇದೇ ಸಾಗರದಲ್ಲಿ ಈಜುತ್ತಿದ್ದಾನೆ " ಎಂದುಕೊಂಡಳು.

ಅವಳ ಮನಸ್ಸಿನ ಮೇಲೆ ಎಷ್ಟೋ ಕಲ್ಪನೆಗಳು ಮೂಡಿದವು. ನಿದ್ದೆ ಬಂದಿತು.

ಕಾರಿನಲ್ಲಿ ರೇವಾದೇವಿಯೂ ಭಟ್ಟನೂ ಇಬ್ಬರೇ ಕುಳಿತಿದ್ದರು. ಭಟ್ಟನ ಮನಸ್ಸು ಹೇಗಿದ್ದಿತೋ ರೇವಾದೇವಿಗೆ ಅರಿವಿರಲಿಲ್ಲ. ಆದರೆ ಅವಳು ಭಟ್ಟನನ್ನು ಮಾತನಾಡಿಸತೊಡಗಿದಳು. ಮೊದಲು ವಿಮಲೆಯ ಮಾತನ್ನೆತ್ತಿದಳು.

ರೇವಾ " ಆ ವಿಮಲಾದೇವಿಯು ಬಹಳ ಚತುರೆ. ಚೆಲುವೆಯೂ ಹೌದು. ಅವಳನ್ನು ನೀವು ಎಲ್ಲಿ ಹಿಡಿದಿರಿ ?" ಎಂದಳು.

ಭಟ್ಟನು " ಎಲ್ಲಿಯೋ ಸಿಕ್ಕಿದಳು. ಅದರಲ್ಲಿ ನನ್ನ ಮೆಹನತ್ತೇನೂ ಇಲ್ಲ. ನಮ್ಮ ಕವಿ ವಿಜಯನು ಅವಳನ್ನು ಆರಿಸಿ ತಂದನು " ಎಂದನು.

" ಸಂಗೀತವನ್ನು ಚೆನ್ನಾಗಿ ಕಲಿತಿದ್ದಾರೆ "

" ನಾವೇ ಹಣ ವೆಚ್ಚ ಮಾಡಿ ಕಲಿಸಿದ್ದೇವೆ "

ರೇವಾ " ಅವಳಿಗಿನ್ನೂ ಮದುವೆಯಿಲ್ಲವೆಂದು ಕಾಣುತ್ತದೆ "

ಭಟ್ “ ಈ ನಟಿಯರು ಮದುವೆಯಾಗುವುದಿಲ್ಲ. ಯಾರೋ ಕೆಲವರು ಪ್ರಸಿದ್ಧ ನಟರನ್ನು ಮದುವೆಯಾಗುವುದುಂಟು. ವಿಮಲೆಗೆ ಇನ್ನೂ ಬೇಕಾದಷ್ಟು ಕಾಲವಿದೆ. ಏನೇ ಆಗಲೀ, ನೀವು ಮೆಚ್ಚಿದಿರಷ್ಟೆ ” ಎಂದನು.

ರೇವಾ ಭಟ್ಟನ ಕೈ ತೆಗೆದುಕೊಂಡು ತನ್ನೆರಡು ಕೈಗಳಿಂದಲೂ ಅವನ ಹಸ್ತವನ್ನು ಹಿಡಿದುಕೊಂಡು “ ನೀವು ಚುನಾಯಿಸಿರುವುದನ್ನೆಲ್ಲಾ ನಾನು ಮೆಚ್ಚುತ್ತೇನೆ. ಆ ವಿಮಲಾದೇವಿಯು ಏನು ? ಲಕ್ಷ್ಮೀದೇವಿಯವರ ಮುಂದೆ ಇವರೆಲ್ಲಾ ಸರಿಗಟ್ಟ ಬಲ್ಲರೇ? ಅವರ ಸೌಂದರ್ಯ, ಅವರ ಕಲಾ ನೈಪುಣ್ಯಗಳನ್ನು ಯಾರಾದರೂ ಮೆಚ್ಚಲೇ ಬೇಕು. ಅವರನ್ನು ಚುನಾಯಿಸಿದವರೂ ನೀವೇ ಅಲ್ಲವೇ ?” ಎಂದಳು.

ಭಟ್ಟನ ಮೈ ರೋಮಾಂಚವಾಯಿತು. ರೇವಾ ಹಿಡಿದುಕೊಂಡಿದ್ದ ಕೈಯನ್ನು ಭಟ್ಟನು ಬಿಡಿಸಿಕೊಳ್ಳಲಾಗಲಿಲ್ಲ. ಅವನು ರೇವಾದೇವಿಯ ಭುಜದ ಮೇಲೆ ತನ್ನ ಮುಖವನ್ನಿಟ್ಟು “ ರೇವಾದೇವಿ, ನಿಮ್ಮ ಚೆಲುವಿನ ಮುಂದೆ ಮತ್ತಾವ ಹೆಂಗಸು ತಾನೇ ಗೆಲ್ಲಬಲ್ಲಳು ? ವಿಮಲೆ, ಲಕ್ಷ್ಮೀದೇವಿಯವರ ರೂಪಲಾವಣ್ಯಗಳಿಗೇನು ಕಡಿಮೆಯಿಲ್ಲ. ಆದರೆ ನಿಮ್ಮ ರೂಪಿನ ಮುಂದೆ ಯಾವ ಹೆಂಗಸನ್ನೂ ನಾನು ಕಂಡಿಲ್ಲ” ಎಂದುಕಿವಿಯಲ್ಲಿ ಹೇಳಿದನು.

ರೇವಾ ತೋಳಿನಿಂದ ಭಟ್ಟನ ಕಂಠವನ್ನು ಬಿಗಿದಿದ್ದಳು. ಅವನ ಮುಖದ ಮೇಲೆ ಮುಖವನ್ನಿಟ್ಟು “ ಲಕ್ಷ್ಮೀದೇವಿಗಿಂತಲೂ ನಾನು ಹೆಚ್ಚೆಂದು ಹೇಳುವಿರಾ ?” ಎಂದು ಮೆಲ್ಲನೆ ಉಸುರಿದಳು

ಭಟ್ಟನ ಕೈ ಆ ರೇವಾದೇವಿಯನ್ನು ಬಿಗಿಯಿತು. “ ರೇವಾ, ಈ ಜಗತ್ತೇ ನೀನು ಜಗನ್ಮೋಹಿನಿಯೆಂದು ಹೇಳುತ್ತದೆ ” ಎಂದು ಹೇಳಿ, ರೇವಾದೇವಿಯ ಕಪೋಲವನ್ನು ಚುಂಬಿಸಿದನು.

ಅವರಿಬ್ಬರೂ ಆಲಿಂಗನ ಚುಂಬನ, ಪಿಸುಮಾತುಗಳಲ್ಲಿ ದಾರಿಯನ್ನು ಕಳೆದರು. ಕಾರು ಬಂದು ಮನೆಯ ಒಳಗಡೆ ನಿಂತಿತು. ರೇವಾದೇವಿಯು ಕಾರಿನಿಂದ ಇಳಿದು ಮನೆಯೊಳಗೆ ಹೋದಳು. ಭಟ್ಟನು ಹಿಂದೆ ಹಿಂದೆ ಹೋದನು. ರೇವಾದೇವಿಯು ಭಟ್ಟನನ್ನು ಒಳಗೆ ಕರೆದೊಯ್ದು ಕೋಣೆಯಲ್ಲಿ ಕೂಡಿಸಿದಳು.

ಭಟ್ಟನು " ಹೊತ್ತಾಗಿದೆ. ನಾನು ಮನೆಗೆ ಹೊರಡಬೇಡವೇ?" ಎಂದು ಕೇಳಿದನು.

ರೇವಾದೇವಿಯು " ಸ್ವಲ್ಪ ಚಳಿ ಹೊತ್ತಾಗಿದೆ. ಚಹಾ ತರಿಸುತ್ತೇನೆ. ಚಹಾ ಕುಡಿದು ಹೋಗಬಹುದು " ಎಂದು ಹೇಳಿದಳು.

ಒಳಗೆ ಹೋಗಿ ಪರಿಚಾರಿಕೆಯೊಬ್ಬಳನ್ನು ಎಬ್ಬಿಸಿ ಚಹಾ ಮಾಡಿ ತರುವಂತೆ ಹೇಳಿದಳು. ತನ್ನ ಕೋಣೆಗೆ ಹೋಗಿ ಬೇರೆಸೀರೆಯನ್ನುಟ್ಟು ಬೇರೊಂದು ಬಾಗಿಲಿನಿಂದ ಭಟ್ಟನು ಕುಳಿತಿದ್ದ ಕೋಣೆಗೆ ಬಂದು ಕುಳಿತಳು. ಬಿಳಿಯ ಸೀರೆಯನ್ನುಟ್ಟಿದ್ದ ಹುಡುಗಿಯೊಬ್ಬಳು ಎರಡು ಬಟ್ಟಲುಗಳಲ್ಲಿ ಚಹಾ ತಂದಿಟ್ಟು ಹೊರಟು ಹೊದಳು. ರೇವಾದೇವಿಯು ಚಹಾ ಬಟ್ಟಲನ್ನು ತೆಗೆದು ಭಟ್ಟನ ಕೈಗೆ ಕೊಟ್ಟಳು. ತಾನೂ ಮತ್ತೊಂದು ಬಟ್ಟಲನ್ನು ಕೈಗೆ ತೆಗೆದು ಕೊಂಡು ರುಚಿ ನೋಡಿದಳು.

ಭಟ್ಟನು ಚಹಾ ಕುಡಿಯುತ್ತಿದ್ದಾಗ ರೇವಾ " ಈಗ ಬಹಳ ಹೊತ್ತಾಗಿದೆ. ನೀವೇಕೆ ಮನೆಗೆ ಹೋಗಬೇಕು ? ಇಲ್ಲಿಯೇ ಇರಬಾರದೇ ?" ಎಂದಳು.

ಭಟ್ಟನು " ಏನೂ ಇಲ್ಲ. ಲಕ್ಷ್ಮಿಯು ಮನೆಯಲ್ಲೊಬ್ಬಳೇ ಇರುತ್ತಾಳೆ. ನನ್ನನ್ನು ಎದುರು ನೋಡುತ್ತಿರಬಹುದು " ಎಂದನು.

ರೇವಾ " ಆಳುಕಾಳುಗಳಿರುತ್ತಾರೆ. ಕಾವಲುಗಾರರಿರುತ್ತಾರೆ. ಒಬ್ಬರೇ ಎಂದರೆ ಏನು ? ಈಗ ನೀವು ಹೊರಟು ಹೋದರೆ, ನಾನೊಬ್ಬಳೇ ಇರುವುದಿಲ್ಲವೇ ? ಹಾಗೆಯೇ " ಎಂದಳು.

ಭಟ್ಟನು ತಲೆಯನ್ನಲ್ಲಾಡಿಸುತ್ತಾ " ಇಲ್ಲ, ನಾನು ಇರಲೊಪ್ಪುವುದಿಲ್ಲ. ನೀವು ಅಪ್ಪಣೆ ಕೊಟ್ಟರೆ...." ಎನ್ನುತ್ತಾ ಚಹಾ ಕಪ್ಪನ್ನು ಮೇಜದ ಮೇಲಿಟ್ಟನು.

ರೇವಾ ಭಟ್ಟನ ಕೈ ಹಿಡಿದುಕೊಂಡು " ನಾನಪ್ಪಣೆ ಕೊಟ್ಟರೆ ಹೋಗುತ್ತೀರಿ. ಕೊಡದಿದ್ದರೆ...." ಎಂದು ಹೇಳಿ ನಕ್ಕಳು.

ಭಟ್ಟನ ಕೈ ಹಿಡಿದು ಆ ಕೋಣೆಯಿಂದ ಮತ್ತೊಂದು ಕೋಣೆಗೆ ಕರೆದೊಯ್ದಳು. ಆ ಕೋಣೆಯಲ್ಲಿದ್ದ ಸುಸಜ್ಜಿತವಾದ ಪರ್ಯಂಕದ ಕಡೆಗೆ

ಕೈಬೆರಳು ತೋರಿಸುತ್ತಾ ಉಳಿದ ರಾತ್ರಿಯನ್ನು ಇಲ್ಲಿದ್ದು ಕಳೆಯಲು ನಿಮಗೆ ಅಪ್ಪಣೆ ಮಾಡಿದ್ದೇನೆ " ಎಂದು ರೇವಾ ನಗುತ್ತಾ ಹೇಳಿದಳು.

ಭಟ್ಟನು ರೇವಾದೇವಿಯನ್ನು ಆಲಂಗಿಸಿದನು.

ಪ್ರಾತಃಕಾಲ ಅವರಿಬ್ಬರೂ ಬೇಗಲೇ ಎದ್ದರೆನ್ನಬಹುದು. ರೇವಾ ದೇವಿಯು ಭಟ್ಟನ ಬೆನ್ನ ಮೇಲೆ ಕೈ ಹಾಕಿ " ನೀವು ಈಗಂತೂ ಹೊರ ಡಲೇ ಬೇಕಷ್ಟೆ " ಎಂದು ಹೇಳಿದಳು.

ಭಟ್ಟನು " ರೇವಾ. ಈಗ ನಿನ್ನನ್ನು ಬಿಟ್ಟಗಲಿ ಹೋಗಲು ನನಗೆ ಮನಸಿಲ್ಲದಿದ್ದರೂ ನೀನು ದೇವಲೋಕದಿಂದ ತಳ್ಳುವಂತೆ ನನ್ನನ್ನು ತಳ್ಳಿ ಬಿಡುವೆ. ನಾವಿಬ್ಬರೂ ಅಸ್ವತಂತ್ರರು " ಎಂದು ಹೇಳಿದನು.

ಭಟ್ಟನು ತನ್ನ ಬಟ್ಟೆಗಳನ್ನು ತೆಗೆದು ಹಾಕಿಕೊಂಡನು. ರೇವಾ ಬೇರೊಂದು ಬಾಗಿಲಿನಿಂದ ಹೊರಗೆ ಹೋಗಿ ದಾದಿಯನ್ನು ಕರೆದು ಚಹಾ ತರುವಂತೆ ಹೇಳಿದಳು. ಪಕ್ಕದ ಕೋಣೆಯಲ್ಲಿ ಚಹಾ ಸಿದ್ಧವಾಯಿತು. ಮನೆಯ ಬಾಗಿಲಿನಲ್ಲಿ ಕಾರು ಸಿದ್ಧವಾಗಿದ್ದಿತು.

ರೇವಾ ಭಟ್ಟನ ಜೊತೆಯಲ್ಲಿ ಬಂದು ಕಾರಿನಲ್ಲಿ ಕುಳ್ಳಿರಿಸಿದಳು. ಭಟ್ಟನು ಕಾರಿನಲ್ಲಿ ಕುಳಿತು ರೇವಾ ಕಡೆಗೆ ನೋಡಿ ಕೈ ಮುಗಿದನು.

ರೇವಾ ಕಣ್ಣು ಹಾರಿಸಿ " ಹೊರಡಿ. ಸೇಟರು ಬಂದ ಮೇಲೆ ಮತ್ತೊಮ್ಮೆ ಬರುವಿರಂತೆ " ಎಂದು ಹೇಳಿದಳು.

ಕಾರು ಮನೆಯ ಕಾಂಪೌಂಡನ್ನು ಬಿಟ್ಟು ಹೊರಟಿತು.

ಭಟ್ಟನು ರಾತ್ರಿಯ ತನ್ನ ಅನುಭವದ ಸವಿ ನೆನಪುಗಳನ್ನು ನೆನೆದು ಕೊಳ್ಳುತ್ತಿದ್ದನು. " ಇದೇನು ? ಈ ರೇವಾದೇವಿಯ ಅನುಗ್ರಹವು-ಇಷ್ಟು ಸುಲಭವಾಗಿ ದೊರೆಯಿತು. ಬೆಳಕು ಹರಿಯುವುದರೊಳಗೆ ಸೇಟನು ಬಂದಿ ದ್ದರೆ ನಮ್ಮಿಬ್ಬರ ಗತಿಯೇನಾಗುತ್ತಿದ್ದಿತು " ಎಂದುಕೊಂಡನು.

" ಇಲ್ಲ. ರೇವಾದೇವಿಗೆ ಮನಸ್ಸಿನಲ್ಲಿ ಅಳುಕೇ ಇರಲಿಲ್ಲ. ನನ್ನಂ ತೆಯೇ ಆ ಪ್ರಭುರಾಜನೂ ಅವಳ ಕೈಗೊಂಬೆ. ಆ ಗೊಂಬೆಯು ಅವಳು ಆಡಿಸಿದಂತೆ ಆಡುತ್ತದೆ. ಈ ಕಣ್ಣುಮುಚ್ಚಾಲೆಯಲ್ಲಿ ರೇವಾ ಅವನ ಕಣ್ಣು

ಕಟ್ಟಿದ್ದಾಳೆ. ಅವಳು ಕಣ್ಣು ಬಿಚ್ಚಿದರೆ ಅವನು ಕಣ್ಣು ತೆರೆಯುತ್ತಾನೆ. ಅವಳು ಕಣ್ಣು ಕಟ್ಟಿದರೆ ಕಣ್ಣು ಮುಚ್ಚುತ್ತಾನೆ. ಅಷ್ಟರಲ್ಲಿ ಈ ರೇವಾ ದೇವಿಯ ವಿಲಾಸವು ಪೂರೈಸಿ ತೆರೆ ಬೀಳುತ್ತದೆ. ಆದ್ದರಿಂದಲೇ ಅವಳಷ್ಟು ಧೈರ್ಯದಿಂದಿದ್ದಾಳೆ. ನನಗೆ ಆ ಧೈರ್ಯವು ಎಲ್ಲಿ ಬರಬೇಕು ? ಇಲ್ಲಿ ಸೇಟಜಿಯ ಭಯ. ಅಲ್ಲಿ ಲಕ್ಷ್ಮೀದೇವಿಯ ಭಯ. ಈಗ ನಾನು ಮನೆಗೆ ಹೋಗಿ ಲಕ್ಷ್ಮಿಗೆ ಹೇಗೆ ಮುಖ ತೋರಿಸಬೇಕು ? ರಾತ್ರಿ ಮನೆಗೆ ಹಿಂತಿರುಗ ದಿದ್ದುದಕ್ಕೆ ಏನು ಹೇಳಬೇಕು ?" ಎಂದು ಲೆಕ್ಕ ಹಾಕಲಾರಂಭಿಸಿದನು.

ಏನೇನೋ ಲೆಕ್ಕ ಹಾಕಿದನು. ನಾಲ್ಕಾರು ಕಥೆಗಳನ್ನು ಕಟ್ಟಿ ಯೋಚಿಸಿಕೊಂಡನು. ಒಂದೂ ಸರಿಬೀಳಲಿಲ್ಲ. ಹಾಗೆಯೇ ಯೋಚನೆ ಮಾಡುತ್ತ ಮನೆಗೆ ಬಂದನು. ಕಾರಿನ ಸದ್ದು ಕೇಳಿ ಲಕ್ಷ್ಮಿಯು ಬಾಗಿಲಿಗೆ ಬರಬಹುದೆಂದು ಒಂದು ಕ್ಷಣ ಕಾರನ್ನಿಳಿಯಲು ನಿದಾನಿಸಿದನು. ಯಾರೂ ಬರಲಿಲ್ಲ. ಜೇಬಿನಿಂದ ಒಂದು ನೋಟನ್ನು ತೆಗೆದು ಡ್ರೈವರಿಗೆ ಇನಾಮು ಕೊಟ್ಟನು. ಅದು ನೂರು ರೂಪಾಯಿಗಳ ನೋಟು. ಕಾರನ್ನಿಳಿದು ಮನೆಯೊಳಗೆ ಹೋದನು. ಯಾರೂ ಇಲ್ಲ. ಶೂನ್ಯಾಲಯದಂತೆ ಕಂಡಿತು.

ಮಹಡಿಯ ಮೇಲಕ್ಕೆ ಹೋದನು. ಒಂದು ಸೋಫಾದ ಮೇಲೆ ಲಕ್ಷ್ಮಿಯು ಪತ್ರಿಕೆಯನೋದುತ್ತಾ ಕುಳಿತಿದ್ದಳು. ಭಟ್ಟನು ಅವಳ ಸಮೀಪದಲ್ಲಿ ಹೋಗಿ ಕುಳಿತನು. ಲಕ್ಷ್ಮಿಯು ತಲೆಯೆತ್ತಿ ನೋಡಿದಳು. ರಾತ್ರಿಯೆಲ್ಲಾ ಜ್ವರ ಬಂದು ಬಳಲಿದವಳಂತೆ ಆಗಿದ್ದಳು. ಮುಖವು ಬಿಳಿಚಿಕೊಂಡಿದ್ದಿತು. ಭಟ್ಟನ ಮನಸ್ಸು ಅಳುಕುತ್ತಿತ್ತು. ಹೃದಯವು ನಡುಗುತ್ತಿತ್ತು.

ಭಟ್ಟನು ಮೆಲ್ಲಮೆಲ್ಲಗೆ ಲಕ್ಷ್ಮಿಯನ್ನು "ನೀನು ಆರೋಗ್ಯವಾಗಿಲ್ಲವೇ ?" ಎನ್ನುತ್ತಾ ಅವಳ ಕೈ ಹಿಡಿದುಕೊಂಡನು.

ಲಕ್ಷ್ಮಿಯು "ಇದ್ದೇನೆ. ಆರೋಗ್ಯವಾಗಿಯೇ ಇದ್ದೇನೆ. ನನಗೇನಾಗಿದೆ" ಎಂದಳು.

ಭಟ್ಟನು "ಲಕ್ಷ್ಮೀ. ಬರಲಾಗಲಿಲ್ಲ, ಕ್ಷಮಿಸು. ನಾನು ಹೋಗುವಷ್ಟರಲ್ಲಿ ಪ್ರಭುರಾಜರು ಬಂದು ಬಿಟ್ಟಿದ್ದರು. ಅವರು ರಾತ್ರಿ ಹನ್ನೊಂದು

ಗಂಟೆಗೆ ಮನೆ ಸೇರಿದ್ದರು. ನಾವು ಹೋಗುವುದನ್ನೇ ನಿರೀಕ್ಷಿಸುತ್ತಿದ್ದರು. ಇಲ್ಲಿಯ ಸಮಾರಂಭವನ್ನೆಲ್ಲಾ ಆಸಕ್ತಿಯಿಂದ ಕೇಳಿದರು. ಅವರೊಡನೆ ಎಲ್ಲವನ್ನೂ ಹೇಳಿ ಮುಗಿಸುವುದರಲ್ಲಿಯೇ ಹೊತ್ತಾಯಿತು. ರಾತ್ರಿ ನಾನು ಮನೆಗೆ ಹಿಂತಿರುಗಿ ಬರುವುದಕ್ಕೆ ಅವರು ಸರ್ವಥಾ ಬಿಡಲಿಲ್ಲ. ಬೆಳಿಗ್ಗೆ ಎದ್ದು ಚಹಾ ಕುಡಿದು ಹೊರಟು ಬಂದೆ" ಎಂದು ಹೇಳಿದನು.

ಲಕ್ಷ್ಮಿಯು ತಲೆದೂಗಿದಳು. ಏನೂ ಮಾತನಾಡಲಿಲ್ಲ. ಭಟ್ಟನು ತನ್ನ ಕೋಣೆಗೆ ಹೋಗಿ ಬಟ್ಟೆಗಳನ್ನು ಬಿಚ್ಚಿದನು. ಸ್ನಾನದ ಮನೆಗೆ ಸ್ನಾನಕ್ಕೆ ಹೋದನು.

೪

ಲಕ್ಷ್ಮೀದೇವಿಯು ಶಿವಪಾರ್ವತಿ ಚಿತ್ರಪಟದ ಆರಂಭೋತ್ಸವವಾದಂದಿನಿಂದ ಅಲಸಿತಳಾಗಿದ್ದಳು. ಒಂದೆರಡು ದಿನಗಳು ಲಕ್ಷ್ಮಿ ಹೊರಗೆ ತೋರಿಸಿಕೊಳ್ಳದೇ ಹೇಗೋ ಕಾಲ ಕಳೆದಳು. ಮೂರನೆಯ ದಿನ ಸ್ವಲ್ಪ ಜ್ವರ ಕಾಣಿಸಿಕೊಂಡಿತು. ಒಂದೆರಡು ಬಾರಿ ವಾಂತಿ ಮಾಡಿಕೊಂಡಳು. ಬಹಳ ನಿಶ್ಯಕ್ತಳಾಗಿ ಮಲಗಿದಳು.

ಭಟ್ಟನು ಗಾಬರಿಗೊಂಡನು. ವೈದ್ಯರಿಗೆ ಹೇಳಿ ಕಳಿಸಿದನು. ಡಾಕ್ಟರು ಬಂದು ನೋಡಿದರು. ಔಷಧಗಳನ್ನು ಕೊಟ್ಟರು. ಭಟ್ಟನು ಯಾವಾಗಲೂ ಲಕ್ಷ್ಮಿಯು ಮಲಗಿದ್ದ ಮಂಚದ ಪಕ್ಕದಲ್ಲಿಯೇ ಕುಳಿತಿರುತ್ತಿದ್ದನು.

ಡಾಕ್ಟರಿಗೆ ಏನೋ ಸಂದೇಹ ಬಂದಿತು. ಅವರು ಮೂರನೆಯ ದಿನ ಬರುವಾಗ ಒಬ್ಬ ಲೇಡೀ ಡಾಕ್ಟರನ್ನು ಕರತಂದು, ಪರೀಕ್ಷೆ ಮಾಡಿಸಿದರು. ಲಕ್ಷ್ಮಿಯು ಗರ್ಭವತಿಯಾಗಿದ್ದಾಳೆಂದೂ ಯಾರಾದರೂ ಆಪ್ತರಾದ ಹೆಂಗಸರು ಸಮೀಪದಲ್ಲಿರಬೇಕೆಂದೂ ಹೇಳಿದರು.

ಭಟ್ಟನು ಆ ದಿನವೇ ಟ್ರಂಕ್ ಟೆಲಿಫೋನ್ ಮೂಲಕ ಮದರಾಸಿಗೆ ತಿಳಿಸಿದನು.

ಕಲ್ಯಾಣಿಯು ಆ ದಿನವೇ ರೈಲಿನಲ್ಲಿ ಹೊರಟು ಬರುವುದಾಗಿ ಹೇಳಿದಳು.

ಕಲ್ಯಾಣಿಯು ಮೂರನೆಯ ದಿನ ರಾತ್ರಿ ಸುಮಾರು ಹತ್ತು ಗಂಟೆಗೆ ಬೊಂಬಾಯಿಗೆ ಬಂದು ತಲುಪಿದಳು.

ಭಟ್ಟನು ವಿಕ್ಟೋರಿಯಾ ಸ್ಟೇಷನ್ನಿಗೆ ಕಾರನ್ನು ತೆಗೆದುಕೊಂಡು ಹೋಗಿದ್ದನು.

ಕಲ್ಯಾಣಿಯು ರೈಲಿನಿಂದ ಇಳಿಯುತ್ತಲೇ ಭಟ್ಟನನ್ನು ನೋಡಿ ಗಾಬರಿಯಿಂದ ಲಕ್ಷ್ಮೀದೇವಿಯ ಯೋಗಕ್ಷೇಮವನ್ನು ವಿಚಾರಿಸಿದಳು.

ಭಟ್ಟನು ಲಕ್ಷ್ಮೀದೇವಿಯು ಗರ್ಭವತಿಯಾಗಿದ್ದಾಳೆಂದೂ ಅವಳಿಗೆ ಸನ್ನಿಪಾತ ಜ್ವರ ಬಂದಿದೆ ಎಂದೂ ತಿಳಿಸಿದನು.

ಕಲ್ಯಾಣಿಯು ಆ ಮಾತು ಕೇಳಿ ಕುಂದಿ ಹೋದಳು.

ಭಟ್ಟನು ಡಾಕ್ಟರು ಸರಿಯಾಗಿ ನೋಡುತ್ತಿದ್ದಾರೆಂದು ಹೇಳಿದನು. ಸೇವಾ ಶುಶ್ರೂಷೆಗಳಿಗೆ ಇಬ್ಬರು ನರ್ಸುಗಳಿದ್ದಾರೆಂದು ತಿಳಿಸಿದನು.

ರೈಲ್ವೆ ಸ್ಟೇಷನ್ನಿನಿಂದ ಭಟ್ಟನು ಕಲ್ಯಾಣಿಯನ್ನು ಮನೆಗೆ ಕರೆತಂದನು.

ಕಲ್ಯಾಣಿಯು ಮನೆಗೆ ಬಂದು ಲಕ್ಷ್ಮೀದೇವಿಯು ಮಲಗಿದ್ದ ಕೋಣೆಗೆ ಹೋಗಿ ನೋಡಿದಳು. ಅವಳ ಗುಂಡಿಗೆಯು ಬಡಿದುಕೊಳ್ಳುತ್ತಲಿತ್ತು.

ಲಕ್ಷ್ಮಿಯು ಕಣ್ಣು ಮುಚ್ಚಿದ್ದಳು. ಕಲ್ಯಾಣಿಯು ಕೈ ಹಿಡಿದು ನೋಡಿದಳು. ಜ್ವರವೇಗವಿತ್ತು.

ನರ್ಸು "ಡಾಕ್ಟರು ಔಷಧಿ ಕೊಟ್ಟಿದ್ದಾರೆ. ಸ್ವಲ್ಪ ಜೊಂಪು ಹತ್ತಿದೆ" ಎಂದು ಹೇಳಿದಳು.

ಕಲ್ಯಾಣಿಯು ಪಕ್ಕದಲ್ಲಿದ್ದ ಕುರ್ಚಿಯ ಮೇಲೆ ಕುಳಿತಳು.

ಭಟ್ಟನೂ ವಿಜಯನೂ ಹೊರಗಡೆ ಮಾತನಾಡುತ್ತಾ ಕುಳಿತಿದ್ದರು. ಕಲ್ಯಾಣಿಯು ಬಂದುದು ಎಷ್ಟೋ ಧೈರ್ಯವಾಯಿತೆಂದು ಮಾತನಾಡಿಕೊಳ್ಳುತ್ತಿದ್ದರು.

ಸುಮಾರು ಅರ್ಧ ಗಂಟೆಯ ಮೇಲೆ ಲಕ್ಷ್ಮಿಯು ಕಣ್ಣು ತೆರೆದಳು.

ಕಲ್ಯಾಣಿಯು ಲಕ್ಷ್ಮಿಯ ಪಕ್ಕದಲ್ಲಿಯೇ ಮಂಚದ ಮೇಲೆ ಕುಳಿತುಕೊಂಡು ಲಕ್ಷ್ಮಿಯ ತಲೆ ಸವರಿದಳು.

ಕಲ್ಯಾಣಿಯು " ಲಕ್ಷ್ಮಿ! ನಿನಗೆ ಏನಾಗಿದೆ ?" ಎಂದು ಕೇಳಿದಳು.

ಲಕ್ಷ್ಮಿಯು "ನಗುತ್ತಾ ಮೂರು ದಿನಗಳಿಂದ ಜ್ವರ ಬಂದಿದೆ" ಎಂದು ಹೇಳಿದಳು.

"ಯಾವಾಗ ಬಂದಿರಿ, ಅತ್ತಿಗೆ! ಸ್ವಾಮಿ ಬಂದಿದ್ದಾರೆಯೇ ? ಮಾಧು ಹೇಗಿದ್ದಾನೆ" ಎಂದು ಕೇಳಿದಳು.

ಕಲ್ಯಾಣಿಯು "ಮಾಧು ಚೆನ್ನಾಗಿದ್ದಾನೆ. ನಾನೊಬ್ಬಳೇ ಬಂದಿದ್ದೇನೆ. ನಿನಗೆ ಬಹಳ ಅಸ್ವಸ್ಥವಾಗಿದೆಯೆಂದು ಫೋನ್ ಬಂತು. ನನಗೆ ದಿಕ್ಕು ತೋರದಂತಾಯಿತು. ಇದ್ದಕ್ಕಿದ್ದಂತೆ ಹೊರಟು ಬಂದೆ" ಎಂದು ಹೇಳಿದಳು.

ಅಷ್ಟರಲ್ಲಿ ಡಾಕ್ಟರು ಬಂದು, ಲಕ್ಷ್ಮಿದೇವಿಯನ್ನು ನೋಡಿದರು. ಔಷಧಿ ಕೊಟ್ಟು ಕುಡಿಸಿದರು.

ಕಲ್ಯಾಣಿಯನ್ನು ವಂದಿಸಿ"ನೀವು ಹೆಚ್ಚಾಗಿ ಮಾತನಾಡಿಸಬಾರದಮ್ಮ" ಎಂದು ಹೇಳಿದರು.

ಕಲ್ಯಾಣಿಯು ಡಾಕ್ಟರನ್ನು ಕೇಳಿ ಲಕ್ಷ್ಮಿಯ ದೇಹಸ್ಥಿತಿಯ ವಿವರಗಳನ್ನೆಲ್ಲಾ ತಿಳಿದುಕೊಂಡಳು. ಹಜಾರಕ್ಕೆ ಬಂದು ಭಟ್ಟನೊಡನೆ ಮಾತನಾಡುತ್ತ ಕುಳಿತಳು. ಆ ರಾತ್ರಿ ಯಾರೂ ನಿದ್ದೆ ಮಾಡಲಿಲ್ಲ. ಬೆಳಿಗ್ಗೆ ಸುಮಾರು ಎಂಟು ಗಂಟೆ ಹೊತ್ತಿಗೆ ಡಾ|| ಜಂಬುಅಯ್ಯರ್ ಬಂದು ನೋಡಿದರು. ಜ್ವರದ ವೇಗವು ಇಳಿದಿರಲಿಲ್ಲ. ಸ್ವಲ್ಪ ಹೊತ್ತು ಯೋಚನೆ ಮಾಡುತ್ತ ಕುಳಿತರು.

ಡಾಕ್ಟರು ಭಟ್ಟನೊಡನೆ "ನೋಡಿ, ಭಟ್. ನಾಲು ದಿನಗಳಾಯ್ತು. ಜ್ವರ ಬಿಟ್ಟಿಲ್ಲ. ಇದರ ಲಕ್ಷಣಗಳನ್ನು ನೋಡಿದರೆ ಟೈಫಾಯಿಡ್ ಎಂಬುದರಲ್ಲಿ ಸಂದೇಹವಿಲ್ಲ. ಯಾವ ಕೆಟ್ಟ ಚಿಹ್ನೆಗಳೂ ಇಲ್ಲ. ಆದರೂ ಗರ್ಭವತಿ. ಅದೊಂದೇ ಯೋಚನೆ. ಹೆಂಗಸರ ಆಸ್ಪತ್ರೆಯಲ್ಲಿಟ್ಟರೆ ಒಳ್ಳೆಯದು" ಎಂದು ಹೇಳಿದರು.

ಕಲ್ಯಾಣಿಯು ಆ ಮಾತುಗಳನ್ನು ಕೇಳಿದಳು. ಅವಳಿಗೂ ದಿಗಲಾ

ಯಿತು. "ನೋಡಿ. ಡಾಕ್ಟರೇ, ನಾವು ಆಸ್ಪತ್ರೆಗೆ ಕಳಿಸುವುದಿಲ್ಲ. ಎಷ್ಟೇ, ಹಣ ಖರ್ಚಾದರೂ ಸರಿ ! ಸಮರ್ಥರಾದ ಲೇಡೀ ಡಾಕ್ಟರೊಬ್ಬರನ್ನು ಕರ ತನ್ನಿ. ಅವರು ಬಂದು ಪರೀಕ್ಷೆ ಮಾಡಲಿ. ನೀವಿಬ್ಬರೇ ಚಿಕಿತ್ಸೆ ಮಾಡಿರಿ. ನಮ್ಮ ಲಕ್ಷ್ಮಿಯನ್ನು ಬದುಕಿಸಿ ಕೊಡಿ" ಎಂದು ಹೇಳಿದಳು.

ಕಲ್ಯಾಣಿಯ ಕಣ್ಣುಗಳಲ್ಲಿ ನೀರು ತೊಟ್ಟಿಕ್ಕುತ್ತಿದ್ದಿತು. ಡಾಕ್ಟರು ಜಂಬುಅಯ್ಯರ್ ಧೈರ್ಯ ಹೇಳಿದರು. ಲೇಡೀ ಡಾಕ್ಟರನ್ನು ಕರತರುವು ದಾಗಿ ಹೇಳಿ ಹೊರಟರು.

ಸುಮಾರು ಹನ್ನೊಂದು ಗಂಟೆಯ ಸಮಯದಲ್ಲಿ ಒಬ್ಬ ಲೇಡೀ ಡಾಕ್ಟರೊಡನೆ ಬಂದರು. ಅವರನ್ನು ಕಲ್ಯಾಣಿ ಮತ್ತು ಭಟ್ ಇವರಿಗೆ ಪರಿಚಯ ಮಾಡಿಸಿದರು. "ಇವರ ಹೆಸರು ಡಾ॥ ಅಮೃತಾಬಾಯಿ. ಈ ನಗರದಲ್ಲಿ ಬಹಳ ಹೆಸರಾದ ಡಾಕ್ಟರು" ಎಂದು ಹೇಳಿದರು.

ಕಲ್ಯಾಣಿಯು ಅಮೃತಾರವರನ್ನು ಕರೆದುಕೊಂಡು ಹೋಗಿ ತೋರಿಸಿ ದಳು. ಅವರು ಲಕ್ಷ್ಮೀದೇವಿಯನ್ನು ಚೆನ್ನಾಗಿ ಪರೀಕ್ಷೆ ಮಾಡಿದರು. ಜ್ವರದ ವೇಗವನ್ನೂ ಪರೀಕ್ಷಿಸಿದರು.

ಜಂಬುಅಯ್ಯರೂ ಅಮೃತಾಬಾಯಿಯೂ ಸ್ವಲ್ಪ ಹೊತ್ತು ಆಲೋ ಚನೆ ಮಾಡಿದರು. ಮೊದಲು ಗರ್ಭವನ್ನು ತೆಗೆದು ಹಾಕಬೇಕೆಂಬ ನಿರ್ಧಾ ರಕ್ಕೆ ಬಂದರು.

ಅಮೃತಾಬಾಯಿಯವರು ಒಂದು ಗಂಟೆಯೊಳಗಾಗಿ ಬರುವುದಾಗಿ ಹೇಳಿ ಹೊರಟು ಹೋದರು. ಹಿಂದಿರುಗಿ ಬರುವಾಗ ಡಾ॥ ಅಮೃತಾ ರೊಡನೆ ಮತ್ತೊಬ್ಬ ಡಾಕ್ಟರು ಬಂದರು. ಹತ್ತು ನಿಮಿಷಗಳೊಳಗಾಗಿ ಅವರು ಗರ್ಭವನ್ನು ತೆಗೆದರು.

ಜಂಬುಅಯ್ಯರ್‌ರೊಡನೆ "ಬಹಳ ಸೂಕ್ಷ್ಮವಾಗಿ ಕೆಲಸ ಮಾಡಿದ್ದೇವೆ. ಸ್ವಲ್ಪವೂ ಪೆಟ್ಟಾಗಿಲ್ಲ" ಎಂದು ಹೇಳಿದರು.

ಲಕ್ಷ್ಮಿಗೆ ಸಂಧ್ಯಾಕಾಲದವರೆಗೆ ಜ್ಞಾನಾವಸ್ಥೆಯು ಬರಲಿಲ್ಲ. ಗೊರ ಗುಟ್ಟುತ್ತಿದ್ದಳು. ಸಂಧ್ಯಾಕಾಲ ಐದು ಗಂಟೆಗೆ ಜ್ಞಾನ ಬಂದಿತು. ಅಮೃತಾ ಬಾಯಿಯವರು ಮತ್ತೊಮ್ಮೆ ನಾಡಿಯನ್ನು ಪರೀಕ್ಷೆ ಮಾಡಿ ನೋಡಿದರು.

" ಸಮ ಸ್ಥಿತಿಯಲ್ಲಿದೆ. ಏನೂ ಭಯವಿಲ್ಲ " ಎಂದು ಹೇಳಿ ಕಲ್ಯಾಣಿಯ ಅಪ್ಪಣೆ ಪಡೆದು ಹೊರಟರು.

ಭಟ್ಟನು ಡಾ॥ ಅಮೃತಾಬಾಯಿಯವರನ್ನು ಬಹಳವಾಗಿ ಅಭಿವಂದಿಸಿದನು.

ಲಕ್ಷ್ಮೀದೇವಿಗೆ ಬಹಳ ಆಲಸ್ಯವಾಗಿದೆಯೆಂದು ರೇವಾದೇವಿಗೆ ತಿಳಿಯಿತು. ಅವಳು ಪ್ರಭುರಾಜನೊಡನೆ ತಿಳಿಸಿದಳು. ಮಾರನೆಯ ಬೆಳಿಗ್ಗೆ ಪ್ರಭುರಾಜ ದಂಪತಿಗಳು ಲಕ್ಷ್ಮೀನಿವಾಸಕ್ಕೆ ಬಂದರು.

ಭಟ್ಟನು ಆ ದಂಪತಿಗಳನ್ನು ಹೊರ ಬಾಗಿಲಿನಲ್ಲಿಯೇ ಎದುರುಗೊಂಡು ಸ್ವಾಗತಿಸಿದನು. ಲಕ್ಷ್ಮೀದೇವಿಯು ಯೋಗಕ್ಷೇಮವನ್ನೆಲ್ಲಾ ತಿಳಿಸಿದಳು. ಹಜಾರದೊಳಗೆ ಬರುತ್ತಲೇ ಕಲ್ಯಾಣಿಯು ರೇವಾದೇವಿಯನ್ನು ಸ್ವಾಗತಿಸಿದಳು.

ಭಟ್ಟನು " ಇವರು ನಮ್ಮ ಅಕ್ಕನವರು, ಕಲ್ಯಾಣಿ " ಎಂದು ರೇವಾದೇವಿಗೆ ಹೇಳಿದನು.

ರೇವಾದೇವಿಯು ಕಲ್ಯಾಣಿಯೊಂದಿಗೆ ಯೋ ಗ ಕ್ಷೇ ಮ ಮಾಡಿದಳು. ಲಕ್ಷ್ಮೀದೇವಿಯು ಆಲಸ್ಯದ ವಿಚಾರದಲ್ಲಿ ಆತುರವನ್ನು ತೋರಿದಳು. ಲಕ್ಷ್ಮೀದೇವಿಯು ಮಲಗಿದ್ದ ಕೋಣೆಗೆ ಹೋಗಿ ಪಕ್ಕದಲ್ಲಿ ಕುಳಿತುಕೊಂಡಳು. ಲಕ್ಷ್ಮೀದೇವಿಯ ತಲೆ ಸವರುತ್ತಾ ದೇಹ ಸ್ಥಿತಿಯನ್ನು ವಿಚಾರಿಸಿದಳು. ಕಲ್ಯಾಣಿಯು ಸಮೀಪದಲ್ಲಿಯೇ ನಿಂತಿದ್ದಳು.

ಭಟ್ಟನು ಪ್ರಭುರಾಜ್‌ರನ್ನು ಕೋಣೆಯೊಳಗೆ ಕರತಂದನು. ಪ್ರಭುರಾಜ್‌ನು ಲಕ್ಷ್ಮೀದೇವಿಯನ್ನು ಮಾತನಾಡಿಸಿ ಸಮಾಧಾನೋಕ್ತಿಗಳನ್ನಾಡಿದನು. ಲಕ್ಷ್ಮೀದೇವಿಯು ಮಲಗಿದ್ದಂತೆಯೇ ಕೈ ಜೋಡಿಸಿದಳು. ನಗುವಿನಿಂದಲೇ ಉತ್ತರ ಕೊಟ್ಟಳು. ಆ ದಂಪತಿಗಳಿಬ್ಬರೂ ಸ್ವಲ್ಪ ಕಾಲ ಅಲ್ಲೇ ಇದ್ದು ಭಟ್ಟನಿಗೆ ಧೈರ್ಯ ಹೇಳಿ, ಲಕ್ಷ್ಮೀ ಮತ್ತು ಕಲ್ಯಾಣಿಯವರ ಅಪ್ಪಣೆ ಪಡೆದು ಮನೆಗೆ ಹಿಂದಿರುಗಿದರು.

ಸುಮಾರು ಮಧ್ಯಾಹ್ನದ ಸಮಯದಲ್ಲಿ ವಿಜಯೇಂದ್ರರಾಯರೊಂದಿಗೆ ವಿಮಲಾ ದೇವಿಯು ಬಂದಳು. ವಿಮಲಾದೇವಿಯು ಕಲ್ಯಾಣಿಯನ್ನು ವಂದಿ

ಸಿದಳು. ಲಕ್ಷ್ಮೀದೇವಿಯೂ ಪರಿಚರ್ಯೆಗೆ ಆರಂಭಿಸಿದಳು. ಅಂದಿನಿಂದ ಲಕ್ಷ್ಮೀದೇವಿಯೂ ಪರಿಚರ್ಯೆ ಎಲ್ಲಾ ವಿಮಲಾದೇವಿಯದೇ ಆಯಿತು. ಹಗಲಿರಳೂ ವಿಮಲೆಯೂ ಲಕ್ಷ್ಮೀದೇವಿಯ ಸಮೀಪದಲ್ಲಿಯೇ ಇದ್ದು ಆದರದಿಂದ ಉಪಚರಿಸುತ್ತಿದ್ದಳು. ಲಕ್ಷ್ಮೀ ದೇವಿಗೆ ವಿಮಲೆಯ ಆದರ ಪೂರ್ವಕ ಉಪಚಾರವು ಬಹಳ ಪ್ರಿಯವಾಗಿತ್ತು.

ಕಲ್ಯಾಣಿಯೂ " ಈ ವಿಮಲಾದೇವಿ ಸಿನಿಮಾ ನಟಿ. ಇವಳು ಇಷ್ಟು ಸೇವೆ ಮಾಡುವುದು ಆಶ್ಚರ್ಯ " ಎಂದುಕೊಳ್ಳುತ್ತಿದ್ದಳು.

ಹೀಗೆ ಎರಡು ವಾರಗಳು ಕಳೆದವು. ಲಕ್ಷ್ಮೀದೇವಿಯೂ ಸ್ವಲ್ಪ ಸ್ವಲ್ಪವಾಗಿ ಚೇತರಿಸಿಕೊಳ್ಳಲಾರಂಭಿಸಿದಳು. ಲಕ್ಷ್ಮೀದೇವಿಗೆ ಗುಣಮುಖವಾಗಿತ್ತು. ಆದರೆ ನಿಶ್ಯಕ್ತಿಯೂ ಅತಿಯಾಗಿದ್ದಿತು. ಲಕ್ಷ್ಮಿಯೂ ಸರ್ವದಾ ಹಾಸಿಗೆಯ ಮೇಲೆ ಮಲಗಿರುತ್ತಿದ್ದಳು. ಕಲ್ಯಾಣಿಯೂ ಯಾವಾಗಲೂ ಸಮೀಪದಲ್ಲಿಯೇ ಕುಳಿತಿರುತ್ತಿದ್ದಳು.

ಸಂಧ್ಯಾಕಾಲದ ಸಮಯವಾಗಿತ್ತು. ಮನೆಯಲ್ಲಿ ಯಾರೂ ಇರಲಿಲ್ಲ. ಲಕ್ಷ್ಮೀ ಕಲ್ಯಾಣಿಯರು ಒಟ್ಟಿಗೆ ಇದ್ದರು.

ಲಕ್ಷ್ಮೀಯೂ " ಅತ್ತಿಗೆ. ಇಲ್ಲಿ ಹೊಸ ಚಿತ್ರಪಟ ನಿರ್ಮಾಣದ ಕೆಲಸಕ್ಕೆ ಆರಂಭವಾಗಿದೆ. ಬಲ್ಲಿರಾ ?" ಎಂದಳು.

ಕಲ್ಯಾಣಿಯೂ " ಬಲ್ಲೆ. ಭಟ್ಟನು ಅದನ್ನೆಲ್ಲಾ ವಿವರವಾಗಿ ಬರೆದಿದ್ದ. ಒಳ್ಳೆಯ ಚಿತ್ರವೆಂದು ಕಾಣುತ್ತದೆ " ಎಂದಳು.

" ಅತ್ತಿಗೆ ! ಒಂದು ಬಾರಿ ಆ ಸ್ಟುಡಿಯೋಕ್ಕೆ ಹೋಗಿ ನೋಡಿಕೊಂಡು ಬರಬಾರದೆ ?" ಎಂದು ನಕ್ಕಳು.

" ನಾನು ಇಲ್ಲಿಗೆ ಬಂದಿದ್ದು ನಿನ್ನ ಆರೋಗ್ಯದ ಗಾಬರಿಯಲ್ಲಿ. ಅದೆಲ್ಲಾ ಮರತೇ ಹೋಯಿತು. ನಿನ್ನನ್ನು ಬದುಕಿಸಿಕೊಂಡರೆ ಸಾಕಾಗಿತ್ತು. ಈಗ ದೇವರ ದಯೆಯಿಂದ ಬದುಕಿಕೊಂಡೆ. ಊರಿಗೆ ಹಿಂದಿರುಗುವುದರೊಳಗಾಗಿ ಒಂದು ದಿನ ಸ್ಟುಡಿಯೋ ನೋಡಿಕೊಂಡು ಬರುತ್ತೇನೆ. ವಿಜಯೇಂದ್ರ ರಾಯರು ಆಹ್ವಾನ ಕೊಟ್ಟಿದ್ದಾರೆ "

" ಹೋಗಿ ನೋಡಿಕೊಂಡು ಬನ್ನಿ ಅತ್ತಿಗೆ. ಅದೊಂದು ಹೊಸ

ಪ್ರಪಂಚ. ಎಷ್ಟು ಜನ ಹುಡುಗಿಯರಿದ್ದಾರೆ, ನೋಡಿ! ನಿಮ್ಮ ಭಟ್ಟರು ಸರ್ವದಾ ಆ ಪ್ರಪಂಚದಲ್ಲಿ ಮುಳುಗಿದ್ದಾರೆ. ಆ ಸ್ಟುಡಿಯೋದಲ್ಲಿ ನಟಿಯರ ಮಧ್ಯದಲ್ಲಿ ನಮ್ಮ ಭಟ್ಟರು. ಮನೆಯ ಬಾಗಿಲಿನವರೆಗೂ ಕಾರಿನಲ್ಲಿ ಆ ಹೆಣ್ಣು ಹುಡುಗಿಯರೇ! ಈ ಹೆಣ್ಣು ರಾಜ್ಯದಲ್ಲಿ ಭಟ್ಟರು "ಅಂಗನಾ ಮಂಗನಾ ಮಂತರೇ ಮಾಧವಂ" ಆಗಿ ಹೋಗಿದಾರೆ" ಎಂದು ನಕ್ಕಳು.

ಕಲ್ಯಾಣಿಯು " ಲಕ್ಷ್ಮೀ! ಆ ಹೆಣ್ಣು ರಾಜ್ಯದ ಬೆಡಗಿನಲ್ಲಿ ಭಟ್ಟನು ನೀತಿಹೀನನಾಗಿದ್ದಾನೆಂದು ಸಂಶಯ ಪಿಶಾಚಿಯು ನಿನ್ನನ್ನು ಕಾಡುತ್ತಿದೆಯೇನು ?"ಎಂದು ಕೇಳಿದಳು.

"ಹಾಗೇಕೆ ಹೇಳುತ್ತೀರಿ, ಅತ್ತಿಗೆ. ವಿಶ್ವಾಮಿತ್ರ ಪರಾಶರಾದಿ ಮಹರ್ಷಿಗಳು ಸ್ತ್ರೀ ಮುಖ ಪಂಕಜವನ್ನು ನೋಡಿ ಮೋಹದಲ್ಲಿ ಮುಳುಗಿದರೆಂದು ಕವಿಗಳು ಹೇಳುವುದನ್ನು ಕೇಳಿಲ್ಲವೇ? ಅದೇ ಇಲ್ಲಿ ಪ್ರತ್ಯಕ್ಷವಾಗಿದೆ. ಅಷ್ಟೆ!"

" ಲಕ್ಷ್ಮೀ. ಪುರುಷರು ಚಪಲಚಿತ್ತರೆಂಬುದು ನಿಜ. ಅಂತಹವರನ್ನು ಪ್ರೇಮ ಪಾಶದಲ್ಲಿ ಕಟ್ಟಿಟ್ಟುಕೊಳ್ಳುವುದೇ ಸಹಧರ್ಮಿಣಿಯ ಚಾತುರ್ಯ! ನಿಮ್ಮ ಅಣ್ಣಂದಿರೇನು ನಿರೀಹ ಸತ್ಪುರುಷರೆಂದು ಕೊಂಡಿದ್ದೀಯೇನು ? ಪುರುಷರೆಲ್ಲಾ ಒಂದೇ ಅಚ್ಚು. ಸ್ವಲ್ಪ ಹೆಚ್ಚು ಸ್ವಲ್ಪ ಕಡಿಮೆ "

" ನೀವು ಹೇಳುವ ವೇದಾಂತವು ಚೆನ್ನಾಗಿದೆ, ಅತ್ತಿಗೆ! ನಿಮ್ಮ ಭಟ್ಟರು ಆ ನಟಿಯರ ಮಧ್ಯೆ ವಿಹರಿಸುತ್ತಿರುವ ಭ್ರಮರ! ಅಥವಾ ವೇದಾಂತಿಗಳಿಗೂ ವೇದ್ಯನಲ್ಲದ ಮಹಾದೇವ! ನನಗೆ ಅವರನ್ನು ಆಳುವ ಶಕ್ತಿ ಇಲ್ಲ! ಅತ್ತಿಗೆ, ಒಂದೆರಡು ದಿನ ಭಟ್ಟರ ಜೊತೆಯಲ್ಲಿ ಸ್ಟುಡಿಯೋಕ್ಕೆ ಹೋಗಿ ಬನ್ನಿ. ಆ ನಟಿಯರ ಮಧ್ಯದಲ್ಲಿ ನೀವು ಏನಾಗುತ್ತೀರೋ ನೋಡಿಕೊಳ್ಳಿ. ಆ ರೇವಾದೇವಿ, ಸೇಟರ ಹೆಂಡತಿ. ಅವಳ ಹಾವಭಾವ ವಯ್ಯಾರಗಳನ್ನು ನೋಡಿದಿರಲ್ಲಾ. ಅವಳು ಗೃಹಸ್ಥರ ಹೆಣ್ಣೆಂದು ನಿಮಗೆ ಕಾಣುತ್ತದೆಯೇನು ?"

" ಹೌದು, ಹೌದು! ಅವಳು ಬಲು ಚತುರೆ. ದೇವರು ಅವಳಿಗೆ ಅಂಥಾ ರೂಪ–ಲಾವಣ್ಯಗಳನ್ನು ಕೊಟ್ಟಿದ್ದಾನೆ. ಅಪಾರ ಐಶ್ವರ್ಯವನ್ನು

ಕರುಣಿಸಿದಾನೆ. ದೇವರ ಸೃಷ್ಟಿಯಲ್ಲಿಯೇ ಅದೊಂದು ಜಾತಿಯ ಹೆಂಗಸರು"

ಲಕ್ಷ್ಮಿಯು "ಸರಿ ! ಅತ್ತಿಗೆಯವರೇ. ಅಂಥದೇಜಾತಿಯ ಹೆಣ್ಣೊಂದು ಭಟ್ಟರಿಗೆ ಮದುವೆಯಾಗಿದ್ದರೆ ಚೆನ್ನಾಗಿತ್ತು " ಎಂದಳು.

ಕಲ್ಯಾಣಿಯು "ಲಕ್ಷ್ಮೀ! ನೀನೇನು ಸೌಂದರ್ಯದಲ್ಲಿ ಕಡಿಮೆಯೇ ? ಗುಣದಲ್ಲಿ ಕೊರತೆಯೇ! ಗಂಡಸರ ಸ್ವಭಾವವೇ ಹಾಗೇ ಚಂಚಲ ಸ್ವಭಾವ!" ಎಂದಳು.

ಲಕ್ಷ್ಮಿಯು " ಹೇಗೇ ಇರಲಿ ! ನಾನೊಬ್ಬಳೇ ಇನ್ನೊಂದು ದಿನವೂ ಇಲ್ಲಿರಲಾರೆ. ನೀವು ಇಲ್ಲಿದ್ದರೆ ನಾನು ಇರುತ್ತೇನೆ. ನೀವೆಲ್ಲಿದ್ದರೆ ನಾನು ಅಲ್ಲಿ " ಎಂದು ಸಣ್ಣ ನಗುವನ್ನು ನಕ್ಕಳು.

ಕಲ್ಯಾಣಿಯು ಮದರಾಸಿಗೆ ಹಿಂದಿರುಗಬೇಕೆಂದು ನಿಶ್ಚಯಿಸಿದಳು. ಲಕ್ಷ್ಮೀದೇವಿಯನ್ನೂ ಜೊತೆಯಲ್ಲಿ ಕರೆದುಕೊಂಡು ಹೋಗಬೇಕೆಂದು ಭಟ್ಟನೊಡನೆ ಹೇಳಿದಳು. ಡಾಕ್ಟರು ಸ್ಥಳ ಬದಲಾವಣೆ ಆವಶ್ಯಕವೆಂದು ಸಲಹೆ ಕೊಟ್ಟರು. ಪ್ರಯಾಣದ ದಿನವೂ ಗೊತ್ತಾಯಿತು.

ಕಲ್ಯಾಣಿಯೂ ಲಕ್ಷ್ಮೀದೇವಿಯೂ ಮದರಾಸಿಗೆ ಪ್ರಯಾಣ ಮಾಡಿದರು. ಭಟ್ಟನೂ ಜೊತೆಯಲ್ಲಿ ಹೊರಟನು. ಹೊರಡುವ ಸಮಯದಲ್ಲಿ ಲಕ್ಷ್ಮೀದೇವಿಯು ವಿಮಲೆಯನ್ನು ಆಲಂಗಿಸಿ ಧನ್ಯವಾದಗಳನ್ನು ಅರ್ಪಿಸಿದಳು. ಕಲ್ಯಾಣಿಯು ವಿಮಲೆಯನ್ನು ಪ್ರಶಂಸಿಸಿದಳು. ಈ ಸನ್ನಿವೇಶದಲ್ಲಿ ವಿಮಲೆಯು ಆ ಸಂಸಾರಕ್ಕೆ ಆತ್ಮೀಯಳೇ ಆಗಿಬಿಟ್ಟಿದ್ದಳು. ಅವಳು ಲಕ್ಷ್ಮೀದೇವಿ ಮತ್ತು ಕಲ್ಯಾಣಿಯರ ಅಗಲಿಕೆಗಾಗಿ ಬಾಡಿದ್ದಳು. ಅವರ ಪ್ರಯಾಣ ಸಮಯದಲ್ಲಿ ವಿಮಲೆಯ ಕಣ್ಣುಗಳು ತೋಯ್ದು ಹೋಗಿದ್ದವು. ರೈಲುಗಾಡಿಯಲ್ಲಿ ಆ ಮೂವರೂ ಕುಳಿತು ಗಾಡಿಯು ಹೊರಟು ಹೋದಾಗ ವಿಮಲೆಯು ಉದಯಕಾಲದ ಚಂದ್ರಬಿಂಬದಂತೆ ನಿಸ್ತೇಜಸ್ಕಳಾಗಿದ್ದಳು.

೫

ಕಲ್ಯಾಣಿಯು ಲಕ್ಷ್ಮಿಯನ್ನೂ ಭಟ್ಟನನ್ನೂ ಬೃಂದಾವನಕ್ಕೆ ಕರೆ ತಂದಳು. ಮಾಧುವು ಅತ್ತೆಯನ್ನು ಆಲಂಗಿಸಿದನು. ಸ್ವಾಮಿಯು ತಂಗಿಯ ಕ್ಷೇಮ ಸಮಾಚಾರ ವಿಚಾರಿಸಿದನು.

ಭಟ್ಟನನ್ನು "ಕುರಿತು ಏನಯ್ಯಾ! ಬಂದೇಬಿಟ್ಟೆ. ನಮ್ಮ ಮನೆಯನ್ನು ಮರತೇಬಿಟ್ಟೆಯೆಂದುಕೊಂಡಿದ್ದೆ. ಕಲ್ಯಾಣಿಯು ನಿಮ್ಮಿಬ್ಬರನ್ನೂ ಹಿಡಿದು ತಂದಳು" ಎಂದು ಹಾಸ್ಯ ಮಾಡಿದನು.

ಭಟ್ಟನು ನಾಲ್ಕಾರು ವಾರಗಳು ಮದರಾಸಿನಲ್ಲೇ ಇದ್ದನು. ಪ್ರತಿ ದಿನವೂ ಲಕ್ಷ್ಮಿಯನ್ನು ಕರೆದುಕೊಂಡು ಸಮುದ್ರ ತೀರಕ್ಕೆ ಹೋಗುತ್ತಿದ್ದನು. ಲಕ್ಷ್ಮಿಗೆ ಬೊಂಬಾಯಿನ ಕಹಿ ವಾಸನೆಗಳೆಲ್ಲಾ ಮಾಸಿಹೋಗಿದ್ದವು. ಪುನಃ ಅವರಿಬ್ಬರಲ್ಲಿಯೂ ಪ್ರಣಯ ಪ್ರೇಮಗಳು ತುಂಬಿ ತುಳುಕುತ್ತಿದ್ದವು.

ಭಟ್ಟನು ಒಂದು ದಿವಸ ಜಮಿನಿ ಸ್ಟುಡಿಯೋಕ್ಕೆ ಹೋಗಿ ವಾರ್ಸರವರನ್ನು ನೋಡಬೇಕೆಂದು ಮನಸ್ಸು ಮಾಡಿದನು. ವಾರ್ಸರವರಿಗೆ ಫೋನ್ ಮಾಡಿದನು.

ಅವರು " ಈ ದಿನ ಮಧ್ಯಾಹ್ನ ದಯವಿಟ್ಟು ನಮ್ಮ ಸ್ಟುಡಿಯೋಕ್ಕೆ ಬನ್ನಿರಿ " ಎಂದು ಫೋನ್ ಮಾಡಿದರು.

ಆ ದಿನ ಮಧ್ಯಾಹ್ನ ಸುಮಾರು ಮೂರು ಗಂಟೆಯ ಸಮಯದಲ್ಲಿ ಭಟ್ಟನು " ಲಕ್ಷ್ಮಿ, ನಾನು ವಾರ್ಸರವರ ಸ್ಟುಡಿಯೋಕ್ಕೆ ಹೋಗುತ್ತೇನೆ. ನೀನು ಬರುವೆಯಾ " ಎಂದು ಕೇಳಿದನು.

ಲಕ್ಷ್ಮಿಗೆ ಸ್ಟುಡಿಯೋ ಹೇಗಿರುತ್ತದೆ ನೋಡಬೇಕೆಂದು ಆಸೆಯಿತ್ತು. ಅವಳು " ನೀವು ಬರಬೇಕೆಂದರೆ ಬರುತ್ತೇನೆ " ಎಂದು ಹೇಳಿದಳು.

ಭಟ್ಟನು " ಹೋಗೋಣ, ನಡೆ. ಸ್ಟುಡಿಯೋ ಹೇಗಿರುತ್ತದೋ ನೋಡಿ ಬರುವೆಯಂತೆ " ಎಂದು ಹೇಳಿದನು.

ಲಕ್ಷ್ಮಿಯು ಜಾಗ್ರತೆಯಾಗಿ ಸಿದ್ಧಳಾದಳು.

ಭಟ್ಟನೂ ಲಕ್ಷ್ಮಿಯೂ ಜೆಮಿನಿ ಸ್ಟುಡಿಯೋಕ್ಕೆ ಹೋದರು. ವಾರ್ಸರು ಸ್ಟುಡಿಯೋ ಆಫೀಸಿನಲ್ಲಿ ಈ ದಂಪತಿಗಳನ್ನು ಸ್ವಾಗತಿಸಿದರು. ಅವರಿಬ್ಬರಿಗೂ ಟೀ ಕೊಟ್ಟರು. ಭಟ್ಟನು ವಾರ್ಸರವರೊಡನೆ ಚಿತ್ರಪಟದ ತಯಾರಿಕೆಯ ಅನುಭವಗಳನ್ನು ಮಾತನಾಡ ತೊಡಗಿದನು.

ಅವನು " ವಾರ್ಸರವರೇ ! ನೀವು ಚಿತ್ರಪಟಗಳ ತಯಾರಿಕೆಯಲ್ಲಿ ಬಹಳ ಕುಶಲರೆಂದು ನನ್ನ ಅಭಿಪ್ರಾಯ. ನಿಮ್ಮೊಡನೆ ಸೇರಿ ಈ ಬಿಸಿನೆಸ್ ಮಾಡಬೇಕೆಂದು ನನಗೆ ಆಸೆಯಿದೆ " ಎಂದು ಹೇಳಿದನು.

ವಾರ್ಸರವರು " ಅದಕ್ಕೇನು ಆಗಬಹುದು. ಯಾವ ರೀತಿ ಮಾಡಬೇಕೆಂದು ನಿಮ್ಮ ಅಪೇಕ್ಷೆ ?" ಎಂದು ಕೇಳಿದರು.

ಭಟ್ಟನು ಕಥಾ ರಚನೆಯು ನನ್ನ ಸ್ನೇಹಿತ ವಿಜಯೇಂದ್ರ ರಾಯನದು. ನಟನಟಿಯರನ್ನು ನೀವೂ ಮತ್ತು ಕವಿಯೂ ಒಪ್ಪಿ ಚುನಾಯಿಸಬೇಕು. ಪಟವನ್ನು ತಯಾರಿಸುವ ವಿಧಾನ ಅದಕ್ಕಾಗುವ ವೆಚ್ಚ ಇವೆಲ್ಲವೂ ಸಂಪೂರ್ಣವಾಗಿ ನಿಮ್ಮ ಜವಾಬ್ದಾರಿ. ಅದರ ವೆಚ್ಚದಲ್ಲಿ ಅರ್ಧವನ್ನು ನಾನು ಮುಂಗಡವಾಗಿ ಕೊಟ್ಟು ಬಿಡುತ್ತೇನೆ. ಪಟವು ನಮ್ಮಿಬ್ಬರಿಗೂ ಸೇರಿದ್ದು" ಎಂದು ಹೇಳಿದನು.

ವಾರ್ಸರವರು ಕ್ಷಣ ಹೊತ್ತು ಯೋಚನೆ ಮಾಡಿ ದೊಡ್ಡ ಕಣ್ಣುಗಳನ್ನು ಅರಳಿಸುತ್ತಾ, " ಭಟ್. ನೀವು ಬಹಳ ಸರಿಯಾಗಿ ಹೇಳಿದಿರಿ. ಈ

ವಿಷಯದಲ್ಲಿ ಇಷ್ಟು ಅಚ್ಚುಕಟ್ಟಾಗಿ ಮಾತನಾಡಿದವರನ್ನು ನಾನು ನೋಡಿಲ್ಲ. ನಿಮಗೆ ಬಹಳ ಅನುಭವವಿದೆಯೆಂದು ಕಾಣುತ್ತದೆ. ನಾನು ಒಪ್ಪಿದ್ದೇನೆ " ಎಂದು ಹೇಳಿದರು.

ಅಷ್ಟು ಹೊತ್ತಿಗೆ ಟೀ ಪೂರೈಸಿತು. ವಾರ್ಸರವರು " ಮಿಸೆಸ್ ಭಟ್. ನೀವು ಟೀ ತೆಗೆದುಕೊಳ್ಳಲಿಲ್ಲವಲ್ಲಾ " ಎಂದರು.

ಲಕ್ಷ್ಮಿಯು " ನಾವು ಮನೆಯಿಂದ ಹೊರಡುವಾಗ ಟೀ ತೆಗೆದು ಕೊಂಡೇ ಬಂದೆವು. ಇನ್ನೂ ಹತ್ತು ನಿಮಿಷಗಳಾಗಿಲ್ಲ, ಕ್ಷಮಿಸಿರಿ. ನನಗೆ ಟೀ ಬೇಡ. ನಿಮ್ಮ ಮಾತುಗಳನ್ನು ಕೇಳುತ್ತಾ ತಂದಿಟ್ಟ ಟೀಯನ್ನು ಮರೆತುಬಿಟ್ಟೆ " ಎಂದಳು.

ವಾರ್ಸರವರು " ನಮ್ಮ ಮಾತುಗಳು ನಿಮಗೆ ಹೇಗೆ ಕಾಣುತ್ತವೆ ?" ಎಂದು ಕೇಳಿದರು.

ಲಕ್ಷ್ಮಿಯು " ಬಹಳ ಸರಿಯಾಗಿದೆ. ಮಾತು ಹೀಗಿರಬೇಕು. ಕಡ್ಡಿ ಮುರಿದು ಕೈಗೆ ಕೊಟ್ಟಂತೆ–" ಎಂದು ಹೇಳಿದಳು.

ವಾರ್ಸರವರಿಗೆ ಮನಸ್ಸಿನಲ್ಲಿಯೇ ಸಂತೋಷವಾಯಿತು. ಅಷ್ಟರಲ್ಲಿ ಭಟ್ಟನೂ ವಾರ್ಸರವರೂ ಪರಮ ಮಿತ್ರರಂತೆ ಆಗಿಬಿಟ್ಟರು. ಮೈಸೂರಿನ ಪತ್ರಕರ್ತರೊಬ್ಬರು ವಾರ್ಸರವರು ಭೇಟಿಗೆ ಬಂದಿದ್ದರು. ಆ ಭೇಟಿಯು ಮೊದಲೇ ನಿಶ್ಚಯವಾಗಿತ್ತು.

ವಾರ್ಸರವರು ಭಟ್ಟರನ್ನು ಕುರಿತು " ನೀವು ಸ್ವಲ್ಪ ಹೊತ್ತು ಇಲ್ಲಿ ಕುಳಿತುಕೊಳ್ಳಿರಿ. ಮೈಸೂರಿನ ಪತ್ರಕರ್ತರೊಬ್ಬರು ಬಂದಿದ್ದಾರೆ. ಅವರೊಡನೆ ಸ್ವಲ್ಪ ಹೊತ್ತು ಮಾತನಾಡಿ ಬರುತ್ತೇನೆ " ಎಂದು ಹೇಳಿ, ಹೊರಗಿನ ವರಾಂಡಕ್ಕೆ ಬಂದರು.

ವರಾಂಡದಲ್ಲಿ ಸುವ್ಯವಸ್ಥೆಯಿಂದ ಅನೇಕ ಕುರ್ಚಿ ಮೇಜುಗಳಿದ್ದವು. ಮೈಸೂರಿನ ಪತ್ರಕರ್ತರು ಬಂದು ಮೇಜದ ಮುಂದೆ ಕುಳಿತಿದ್ದರು. ವಾರ್ಸರವರು ಬಂದು ಅವರಿಗೆ ಅಭಿವಂದಿಸಿ, ಪಕ್ಕದ ಕುರ್ಚಿಯಲ್ಲಿ ಕುಳಿತುಕೊಂಡರು.

ಪತ್ರಕರ್ತರು ವಾರ್ಸರವರಿಗೆ ಒಂದು ಕಥೆಯ ವಿಚಾರವಾಗಿ ವಿವರಿಸಿ

ದರು. ಅದನ್ನು ಚಿತ್ರಪಟ ತೆಗೆಯಬೇಕೆಂದು ಹೇಳಿದರು. ವಾಸ್‌ರವರು ಕೊಂಚ ಧೂರ್ತತೆಯಿಂದ "ಕಥೆಗಳಿಗೇನು ಕಡಿಮೆ? ಚಿತ್ರಪಟವನ್ನು ತಯಾರಿಸುವುದು ಸುಲಭವೆಂದು ಕೊಂಡಿದ್ದೀರಾ ? ನಿಮ್ಮಂಥಾ ವಿದ್ವಾಂಸರಿಗೆ ಒಪ್ಪುವ ರೀತಿಯು ಜನ ಸಾಮಾನ್ಯಕ್ಕೆ ಪ್ರಿಯವಾಗುವುದಿಲ್ಲ. ಜನರಿಗೆ ಪ್ರಿಯವಾಗುವುದನ್ನು ನೀವು ಒಪ್ಪುವುದಿಲ್ಲ " ಎಂದು ಹೇಳಿದರು.

ಪತ್ರಕರ್ತರಿಗೆ ಸ್ವಲ್ಪ ರೇಗಿತು. ಅವರು " ವಾಸ್‌ರವರೇ! ಮಂಗಮ್ಮನಂಥಾ ಕಥೆಗಳನ್ನು ತಂದು ದುಡ್ಡು ಬಂದರಾಯಿತೇ ? ಆ ಕಥೆಗಳ ಮಟ್ಟವನ್ನು ಏರಿಸ ಬೇಡವೇ?" ಎಂದು ಕೇಳಿದರು.

ವಾಸ್‌ರವರಿಗೆ ಕೋಪ ಬರಲಿಲ್ಲ ! " ದುಡ್ಡು ಬರುವ ದಾರಿಯಲ್ಲಿಯೇ ಮೇಲಿನ ಮಟ್ಟಕ್ಕೆ ಏರಿಸಬೇಕು " ಎಂದು ಹೇಳಿದರು.

" ಇರಲಿ, ಪತ್ರಕರ್ತರೇ ನಾಳೆ ಪುನಃ ಮಾತನಾಡೋಣ. ನಾನೊಂದು ಹೊಸ ಚಿತ್ರವನ್ನು ತಯಾರಿಸುತ್ತಿದ್ದೇನೆ. ಅದು ಚಂದ್ರಲೇಖ. ಈಗ ನಮ್ಮ ಸ್ಟುಡಿಯೋದಲ್ಲಿ ಅದರ " ಷಾಟ್ಸ್ "ಗಳನ್ನು ಹಾಕುತ್ತಾರೆ. ದಯವಿಟ್ಟು ನೋಡಿರಿ" ಎಂದು ಹೇಳಿ ಪತ್ರಕರ್ತರನ್ನು ಸ್ಟುಡಿಯೋದೊಳಗೆ ಕರೆದೊಯ್ದು ತೋರಿಸುವಂತೆ ಒಬ್ಬ ಗುಮಾಸ್ತರಿಗೆ ಹೇಳಿ ಆ ಪತ್ರಕರ್ತರನ್ನು ಅವರ ಜೊತೆಯಲ್ಲಿ ಕಳುಹಿಸಿ ಕೊಟ್ಟರು.

ಒಳಗೆ ಬಂದು " ಭಟ್, ಕ್ಷಮಿಸಿರಿ. ಸ್ವಲ್ಪ ತಡವಾಯಿತು. ಹೋಗೋಣ. ನಮ್ಮ ಸ್ಟುಡಿಯೋದ ಪ್ರದರ್ಶನ ಶಾಲೆಯಲ್ಲಿ ನಮ್ಮ ಹೊಸ ಚಿತ್ರ ತಯಾರಿಕೆ ಚಂದ್ರಲೇಖ " ಷಾಟ್ಸ್ " ಹಾಕುವ ಏರ್ಪಾಡು ಮಾಡಿದ್ದೇನೆ. ನೋಡೋಣ ಬನ್ನಿ " ಎಂದು ಹೇಳಿ ಪ್ರದರ್ಶನಾಲಯಕ್ಕೆ ಆ ದಂಪತಿಗಳನ್ನು ಕರೆದುಕೊಂಡು ಹೋದನು.

ಅವರು ಆಫೀಸಿನಿಂದ ಪ್ರದರ್ಶನಾಲಯಕ್ಕೆ ನಡೆದು ಹೋಗುತ್ತಿರುವಾಗ ದಕ್ಷಿಣ ದೇಶದ ಸುಪ್ರಸಿದ್ಧ ನಟಿಯೊಬ್ಬಳು ಕಾರಿಳಿದು ಬಂದಳು. ವಾಸ್‌ರವರು ಅವಳನ್ನು ನೋಡಿದರೂ ನೋಡದವರಂತೆ ಒಳಗೆ ಹೋಗಿ ಭಟ್ಟರನ್ನೂ ಅವರ ಪತ್ನಿಯನ್ನೂ ಕೂಡಿಸಿ ತಾವೂ ಕುಳಿತುಕೊಂಡರು. ಅವರ ಬಲಗಡೆಯಲ್ಲಿ ಮೈಸೂರಿನ ಪತ್ರಕರ್ತರನ್ನು ಕರೆಸಿ ಕೂಡಿಸಿಕೊಂಡರು. " ಷಾಟ್ಸ್ " ಪ್ರದರ್ಶನವು ಶುರುವಾಯಿತು.

ಮ್ಯಾನೇಜರ್ ಬಂದು "ಆ ನಟಿಯು ಬಂದಿದ್ದಾಳೆ. ತಮ್ಮನ್ನು ಭೇಟಿ ಮಾಡಬೇಕೆನ್ನುತ್ತಾಳೆ" ಎಂದು ತಿಳಿಸಿದನು.

ವಾಸರ್ರವರು "ಈಗ ನನಗೆ ಅವಕಾಶವಿಲ್ಲ" ಎಂದು ಹೇಳಿದರು.

ಮ್ಯಾನೇಜರ್ ಒಂದು ಕ್ಷಣ ಸುಮ್ಮನಿದ್ದು "ಮತ್ತಾವಾಗ ಪುರಸತ್ತಾಗುತ್ತದೆ ?" ಎಂದು ಕೇಳಿದನು.

ವಾಸನ್‌ರವರು ಮುಖವನ್ನು ಸ್ವಲ್ಪ ಗಂಟಿಕ್ಕಿ "ನನಗೆ ಪುರುಸೊತ್ತೇ ಆಗುವುದಿಲ್ಲ. ಈಗ ನನಗೆ ಅವರೊಡನೆ ಮಾತನಾಡುವ ಪ್ರಮೇಯವೇನೂ ಕಾಣುವುದಿಲ್ಲ. ನಾನು ಈ ಚಂದ್ರಲೇಖಾ ಪತವನ್ನು ಯಶಸ್ವಿಯಾಗಿ ಮಾಡುವುದರಲ್ಲಿ ಮುಳುಗಿದ್ದೇನೆ" ಎಂದು ಹೇಳಿದರು.

ಆ ಮ್ಯಾನೇಜರು ಹೊರಟು ಹೋದನು. ಭಟ್ಟನು ವಾಸನ್‌ರವರನ್ನು ಕುರಿತು ಮೆಲ್ಲಗೆ ಪ್ರಸ್ತಾಪ ಮಾಡಿದನು. "ಇದೇನು ಸಾರ್ ? ಇಷ್ಟು ಖಡಾಖಂಡಿತವಾಗಿ ಹೇಳಿಬಿಟ್ಟಿರಿ. ಆಕೆಯು ಈ ದಕ್ಷಿಣ ದೇಶದಲ್ಲಿ ಸುಪ್ರಸಿದ್ಧ ನಟಿಯೆಂದು ಕೇಳಿದ್ದೇನೆ" ಎಂದನು.

ವಾಸರ್ರವರು ಮುಗುಳು ನಗೆಯನ್ನು ನಗುತ್ತಾ "ಅದೇ ಈ ವ್ಯಾಪಾರದಲ್ಲಿರುವ ಬಿಗಿ. ದಾಕ್ಷಿಣ್ಯದ ಲವಲೇಶವೂ ಇರಬಾರದು. ಆಕೆಯು ಇಪ್ಪತ್ತೈದು ಮೂವತ್ತು ಸಹಸ್ರ ರೂಪಾಯಿಗಳು ಸಾಲವನ್ನು ಕೇಳಲು ಬಂದಿದ್ದಾಳೆ. ಆಕೆಯ ಮಗಳಿಗೆ ಮದುವೆಯಂತೆ" ಎಂದು ಹೇಳಿದರು.

ಭಟ್ಟನು ಸ್ಖಲಿತ ವಾಣಿಯಿಂದ "ಆಕೆಗೆ ಒಂದೊಂದು ಚಿತ್ರಕ್ಕೆ ೪೦–೫೦ ಸಾವಿರ ರೂಪಾಯಿಗಳವರೆಗೆ ಬರುತ್ತದಂತೆ. ೨೫ ಸಾವಿರ ರೂಪಾಯಿಗಳನ್ನೂ ಕೊಟ್ಟರೆ ಎಲ್ಲಿ ಹೋಗುತ್ತದೆ ? ಸಮಯದಲ್ಲಿ ಸಹಾಯ ಮಾಡಿ ದಾಕ್ಷಿಣ್ಯವನ್ನು ಹೊರಿಸಿದಂತಾಗುವುದಿಲ್ಲವೇ" ಎಂದನು.

ವಾಸನ್‌ರವರು ಗಟ್ಟಿಯಾಗಿ ನಕ್ಕು "ಭಟ್ಟ. ಅದೇ ಗುಟ್ಟು. ಈ ರಹಸ್ಯವನ್ನು ನೀವು ಅನುಭವದಿಂದ ಅರಿಯ ಬೇಕು. ಅವರಿಗೆ ದುಡ್ಡು ಕೊಟ್ಟರೆ ಎಲ್ಲೂ ಹೋಗುವುದಿಲ್ಲ. ಆದರೆ ಅವರಿಗೆ ತಕ್ಕ ಕಥೆಯನ್ನು ನಿರ್ಮಾಣ ಮಾಡಬೇಕು. ಅದಕ್ಕನುಗುಣವಾಗಿ ಇತರ ನಟನಟಿಯರನ್ನು ಹೊಂದಿಸಬೇಕು. ಅವರು ಕೇಳಿದಷ್ಟು ಫೀಸು ಕೊಡಬೇಕು. ಇಷ್ಟಕ್ಕೆಲ್ಲಾ ಇಂದೇ ನಾವು ಕಟ್ಟುಬಿದ್ದಂತಾಗುತ್ತದೆ. ನಮಗೆ ಬೇಕಾದಾಗ, ಅವರನ್ನು

ಚುನಾಯಿಸಿದಾಗ ಸರಿಹೊಂದಿದರೆ ಹೆಚ್ಚು ಫೀಸು ಕೊಟ್ಟು ತೆಗೆದು ಕೊಂಡರೂ ನಷ್ಟವಿಲ್ಲ. ಅದೇ ಈ ವ್ಯಾಪಾರದ ರಹಸ್ಯ" ಎಂದು ಹೇಳಿದರು.

ಅಷ್ಟು ಹೊತ್ತಿಗೆ ನಾಲ್ಕೈದು ಷಾಟುಗಳು ಪೂರೈಸಿದ್ದವು.

ವಾಸನ್‌ರವರು ಭಟ್ಟನನ್ನು ಕುರಿತು "ಹೇಗಿದೆ ಇದು ?" ಎಂದು ಕೇಳಿದರು.

ಭಟ್ಟನು "ಅಮೋಘವಾಗಿದೆ. ಬಹಳವಾಗಿ ಜನರ ಮನಸ್ಸನ್ನು ಆಕರ್ಶಿಸುವಂತಿದೆ" ಎಂದು ಹೇಳಿದನು.

ಲಕ್ಷ್ಮಿಯೂ "ಬಹಳ ಚೆನ್ನಾಗಿದೆ, ಬಹಳ ಚೆನ್ನಾಗಿದೆ" ಎಂದು ದನಿ ಕೂಡಿಸಿದಳು.

ವಾಸನ್‌ರವರು ತಮ್ಮ ಬಲಗಡೆಯಲ್ಲಿ ಕುಳಿತಿದ್ದ ಪತ್ರಕರ್ತರನ್ನು ಕುರಿತು "ಸ್ವಾಮಿಾ. ನಿಮ್ಮ ಅಭಿಪ್ರಾಯವೇನು ?" ಎಂದು ಕೇಳಿದರು.

ಆ ಪತ್ರಕರ್ತರು "ನಮ್ಮ ಅಭಿಪ್ರಾಯವು ಬೇಕೆ ? ಅದರಿಂದ ನಿಮ ಗೇನು ಪ್ರಯೋಜನ? ನೀವು ಅದನ್ನು ಲಕ್ಷ್ಯ ಮಾಡುವಿರಾ" ಎಂದು ಹೇಳಿದರು.

ವಾಸನ್‌ರವರು "ಪರವಾಯಿಲ್ಲ. ಹೇಳಿರಿ. ನಿಮ್ಮ ಅಭಿಪ್ರಾಯವೂ ಗಣನೀಯವಾದುದೇ ?" ಎಂದರು.

ಪತ್ರಕರ್ತರು "ಕೇಳಿ, ವಾಸನ್‌ರವರೇ! ಈ ಕಥೆಯನ್ನು ನೋಡಿದರೆ ಎಂಥವರಿಗಾದರೂ ಸುಳ್ಳು ಪೊಳ್ಳಿನ ಕಟ್ಟು ಕಥೆಯೆಂದು ತೋಚದೇ ಇರದು. ಇದು ಹಳೇ ಕಾಲದ್ದೂ ಅಲ್ಲ. ಹೊಸ ಕಾಲದ್ದೂ ಅಲ್ಲ. ಒಂದೇ ಒಂದು ಸ್ವಾರಸ್ಯವನ್ನು ಇದರಲ್ಲಿ ಕಂಡುಕೊಂಡಿದ್ದೀರಿ. ನಿಮ್ಮ ಮಂಗಮ್ಮನ ಚಿತ್ರದಲ್ಲಿ ದೊಂಬರ ಹುಡುಗಿಯ ಪಾತ್ರವೂ, ಗಾನವೂ, ನರ್ತನವೂ ಅತ್ಯಂತ ಜನಾಕರ್ಶಣೀಯವಾಗಿದೆ. ಅದನ್ನೇ ನೂರ್ಮಡಿ ಮಾಡಿ ಇಲ್ಲಿ ಪ್ರದರ್ಶಿಸಿರುವಿರಿ. ಇದೇ ಈ ಚಿತ್ರದ ರಹಸ್ಯ" ಎಂದು ಹೇಳಿದರು.

ವಾಸನ್‌ರವರು ಮೌನ ಮುದ್ರೆಯನ್ನು ಧಾರಣೆ ಮಾಡಿದರು. ಆ ಪ್ರದರ್ಶನವು ಪೂರೈಸಿತು. ಭಟ್ಟನೂ ಲಕ್ಷ್ಮಿಯೂ ವಾಸನ್‌ರವರ ಅಪ್ಪಣೆಯನ್ನು ತೆಗೆದುಕೊಂಡು ಹೊರಟರು.

ಮನೆಗೆ ಬರುತ್ತಾ ಆ ದಂಪತಿಗಳಿಬ್ಬರೂ ಚಂದ್ರಲೇಖಾ ಚಿತ್ರದ

ಸ್ವಾರಸ್ಯವನ್ನು ಮಾತನಾಡುತ್ತ ಬಂದರು. ಭಟ್ಟನು "ಲಕ್ಷ್ಮಿ, ಆ ಚಿತ್ರವು ಅದ್ಭುತ ನಿರ್ಮಾಣ. ಬಹಳ ದುಡ್ಡು ಬರುತ್ತದೆ" ಎಂದು ಹೇಳಿದನು.

ಲಕ್ಷ್ಮಿಯು "ಚಿತ್ರವೇನೋ ಚೆನ್ನಾಗಿರಬಹುದು. ಆ ಮೈಸೂರಿನ ಪತ್ರಿಕರ್ತರು ಹೇಳಿದ ಮಾತುಗಳು ನಿಮ್ಮ ಕಿವಿಯಯಲ್ಲಿ ಬೀಳಲಿಲ್ಲವೆ ?" ಎಂದಳು.

ಭಟ್ಟನು "ಬಿತ್ತು ! ಬಿತ್ತು ! ಬೀಳದೇ ಏನು ? ಅದು ಪತ್ರಿಕರ್ತರ ಕಟುಗ್ರವಾದ ವಿಮರ್ಶಕ ದೃಷ್ಟಿ. ಚಿತ್ರಪಟವೆಂದರೆ ಚಿತ್ರಪಟ. ಮನರಂಜಕವಾಗಿದ್ದರೆ ಸರಿ. ಇನ್ನೇನು ತಾನೇ ಕಾರ್ಯಗತ ಮಾಡಲಾದೀತು ? ದೇವಲೋಕದ ನಂದನ ವನವನ್ನು ಭೂಲೋಕಕ್ಕೆ ತರಲಾಗುವುದೇ ? ಪಾತಾಳದ ನಾಗಕನ್ನಿಕೆಯರನ್ನು ಭೂಮಿಗೆ ಎತ್ತಿಕೊಂಡು ಬರಲು ಸಾಧ್ಯವೇ ? ಇಷ್ಟೇ ಮಾಡಲು ಸಾಧ್ಯ. ವಿಮರ್ಶಕರಿಗೇನೂ ಇತಿಮಿತಿಗಳೇ ಇರುವುದಿಲ್ಲ. ಆ ಪತ್ರಿಕರ್ತರು ಚಿತ್ರ ಪ್ರಪಂಚಕ್ಕಿಳಿದು ಕೃತಿಯಲ್ಲಿ ಅವರ ಬುದ್ಧಿಯನ್ನು ತೋರಲಿ. ತಾನಾಗಿಯೇ ಗೊತ್ತಾಗುತ್ತದೆ, ಅವರ ಬೇಳೇಕಾಳು" ಎಂದು ಹೇಳಿದನು.

ಇಷ್ಟು ಹೊತ್ತಿಗೆ ಭಟ್ಟನ ಮನೆಯು ಬಂದಿತು. ಭಟ್ಟನೂ ಲಕ್ಷ್ಮಿಯೂ ಮಹಡಿಯ ಮೇಲೆ ಹೋಗಿ ಭಟ್ಟನ ವಿಶ್ರಾಂತಿ ಕೋಣೆಯೊಳಗೆ ಕುಳಿತರು. ಭಟ್ಟನು ಮೈಮೇಲಿದ್ದ ಅಂಗಿಯನ್ನು ತೆಗೆದು ಹಾಕಿ ಮಂಚದ ಮೇಲೆ ಒರಗಿಕೊಂಡು ಕುಳಿತನು. ಲಕ್ಷ್ಮಿಯು ಫ್ಯಾನ್ ಹಾಕಿದಳು.

ಲಕ್ಷ್ಮಿಯು ನಗುತ್ತಾ "ನಾಥ ! ನಾನೊಂದು ಮಾತು ಹೇಳಲೇ" ಎಂದು ಕೇಳಿದಳು.

ಭಟ್ಟನು "ಹೇಳು, ಹೇಳು, ಲಕ್ಷ್ಮಿ, ಅದೇನು ಹೇಳು? ನಾನು ಯಾವಾಗಲೂ ನಿನ್ನ ಮಾತಿಗೆ ಸಿದ್ಧನಾಗಿದ್ದೇನೆ" ಎಂದನು.

"ನೋಡಿ, ಭಟ್. ಈ ದಿನ ಜೆಮಿನಿ ಸ್ಟುಡಿಯೋಕ್ಕೆ ಹೋಗಿದ್ದೆವಲ್ಲಾ. ಅಲ್ಲಿ ಆ ವಾಸನ್‌ರವರನ್ನು ನೋಡಿ ನನಗೆ ದಿಗ್ಭ್ರಮೆಯಾಯಿತು. ಅವರಿಂದ ನೀವೇನು ಪಾಠವನ್ನು ಕಲಿತಿರಿ ? ಹೇಳಿ, ನೋಡೋಣ"

"ಏನೂ ಇಲ್ಲ. ವಾಸ್ಸರವರು ನನಗೇನೂ ಹೊಸಬರಲ್ಲ. ಅವರು

ಯಾವಾಗಲೂ ಕಠಿಣ ಸ್ವಭಾವದವರು. ನಿರ್ದಾಕ್ಷಿಣ್ಯ ಪ್ರಕೃತಿ. ಸ್ವಲ್ಪ ಹೆಮ್ಮೆ. ಈ ದೋಷವನ್ನು ಅನೇಕರು ಅವರಲ್ಲಿ ಕಂಡಿದ್ದಾರೆ. ಅದರಿಂದಲೇ ಅನೇಕರು ಅವರನ್ನು ದ್ವೇಷಿಸುತ್ತಾರೆ. ನಾನು ಹಾಗೆ ಮಾಡಲು ಇಷ್ಟ ಪಡುವುದಿಲ್ಲ "

ಲಕ್ಷ್ಮಿಯು " ಭಟ್ಟರೇ, ಮಹಾಶಯರೇ, ಯಾರು ದೂಷಿಸಿದರೇನು ? ಯಾರು ಭೂಷಿಸಿದರೇನು ? ವಾರ್ಸರವರ ಚಾಣಾಕ್ಷತೆಯೇ ಸರಿಯೆಂದು ನಾನು ಸಾವಿರ ಬಾರಿ ಹೇಳುತ್ತೇನೆ. ನೋಡಿ, ಆ ನಟಿಯ ವಿಚಾರದಲ್ಲಿ ಅವರೆಷ್ಟು ತಾತ್ಸಾರವನ್ನು ತೋರಿಸಿದರು. ಎಂಥಾ ನಿರ್ದಾಕ್ಷಿಣ್ಯ. ಹಾಗಿರಬೇಡವೇ ? ಚಿತ್ರಪಟದ ಅಧಿಪತಿಗಳಾದ ನೀವು ಆ ವಿಮಲಾದೇವಿಯನ್ನು ಕರೆತಂದು ದೇವಕನ್ಯೆಯೆಂದು ಕೊಂಡಾಡುವಿರಿ. ಅಂದಿನ ಆ ಚಿತ್ರ-ಇಂದಿನ ಈ ಚಿತ್ರ-ಇವೆರಡನ್ನೂ ನೀವೇ ಹೋಲಿಸಿ ನೋಡಿರಿ" ಎಂದುಹೇಳಿ ಭಟ್ಟನ ಗಲ್ಲದನ್ನು ಹಿಡಿದು ಅಲ್ಲಾಡಿಸಿದಳು.

ಭಟ್ಟನ ಮುಖದಲ್ಲಿ ನಾಚಿಕೆಯು ಮೂಡಿತು.

ಅವನು ಲಕ್ಷ್ಮಿಯ ಕೈಯನ್ನು ಹಿಡಿದುಕೊಂಡು ಸವರುತ್ತಾ " ನಿನಗೆ ಗೊತ್ತಿಲ್ಲ, ಲಕ್ಷ್ಮಿ. ವಿಮಲಾದೇವಿಯು ಸಿನಿಮಾ ನಟಿಯರ ದರ್ಜೆಯವಳಲ್ಲ. ಅವಳು ಗೃಹಸ್ಥರ ಹೆಣ್ಣು. ಅವಳಿಗೆ ನಾನು ಕೊಡುವ ಮರ್ಯಾದೆಯು ಸರಿಯಾಗಿಯೇ ಇದೆ. ಅವಳ ಮನೋಭಾವವನ್ನು ನಾನು ಅರಿತಿದ್ದೇನೆ. ಏನೋ ಇದೊಂದು ಚಿತ್ರದಲ್ಲಿ ನಮ್ಮ ಬಲಾತ್ಕಾರಕ್ಕೆ ಅಭಿನಯಿಸಲು ಒಪ್ಪಿದ್ದಾಳೆ. ಹುಡುಗಿ, ಚಿತ್ರಪಟದಲ್ಲಿ ಒಂದು ಬಾರಿ ಅಭಿನಯ ಮಾಡಬೇಕೆಂದು ಆಶೆ. ನೋಡು, ಅವಳು ಕ್ಷಿಪ್ರದಲ್ಲಿಯೇ ಯಾವನೋ ಒಬ್ಬ ಉತ್ತರ ದೇಶದ ದೊಡ್ಡ ಮನುಷ್ಯನನ್ನು ಮದುವೆಯಾಗಿ ನಿನ್ನಂತೆಯೇ ಗೃಹಣಿಯಾಗುವಳು " ಎಂದು ಹೇಳಿ ಆ ಲಕ್ಷ್ಮಿಯು ಭುಜವನ್ನು ಬಗ್ಗಿಸಿ ಚುಂಬಿಸಿದನು.

ಲಕ್ಷ್ಮಿಯು ಕಣ್ಣುಗಳಲ್ಲಿ ಕ್ರೋಧವನ್ನು ವ್ಯಕ್ತಪಡಿಸುತ್ತಾ "ನನ್ನಂತೆ ಗೃಹಿಣಿ ! ಗೃಹಿಣಿ ! ಒಂದು ಬಾರಿ ಸಿನಿಮಾ ಪ್ರಪಂಚಕ್ಕೆ ಇಳಿದ ಮೇಲೆ ಆಯಿತು. ಎಲ್ಲ ನಟಿಯರೂ ಹೀಗೆಯೇ. ಸಿನಿಮಾ ಪ್ರಪಂಚಕ್ಕೆ ಮೊಟ್ಟ ಮೊದಲು ಬರುವಾಗ ಹಾಗೆಯೇ ಇರುವುದು. ಅದೂ ಒಂದು ನಟನೆ. ಅಂಥ

ವರನ್ನು ನನಗೆ ಹೋಲಿಸಬೇಡಿರಿ " ಎನ್ನುತ್ತಾ ಭಟ್ಟನ ಕೆನ್ನೆಯನ್ನು ಹಿಂಡಿದಳು.

ಭಟ್ಟನು " ಇಲ್ಲ ! ಲಕ್ಷ್ಮಿ, ಇನ್ನು ಮೇಲೆ ಆ ಮಾತನ್ನೆತ್ತುವುದಿಲ್ಲ. ಕ್ಷಮಿಸು " ಎಂದು ಹೇಳುತ್ತಾ ಲಕ್ಷ್ಮಿಯ ಎರಡು ಕಪೋಲಗಳನ್ನೂ ಚುಂಬಿಸಿದನು.

ಹೊತ್ತು ಮುಳುಗಿತ್ತು. ಕತ್ತಲೆಯಾಗುವ ಸಮಯ. ಲಕ್ಷ್ಮಿಯು " ಇದೇನು ಮನೆಯಲ್ಲಿ ಕುಳಿತಿರುವುದು? ಬೀಚಿಗೆ ಹೋಗೋಣ, ನಡಿಯಿರಿ" ಎಂದು ಹೇಳಿದಳು. ಭಟ್ಟನು ಒಪ್ಪಿ ಅಂಗಿಯನ್ನು ಧರಿಸಿದನು. ಲಕ್ಷ್ಮಿಯು ಅಲ್ಲಿಂದ ಹೋಗಿ ಮುಖ ತೊಳೆದು ಹಣೆಯಲ್ಲಿ ಅರಗಜದ ಬೊಟ್ಟನ್ನಿಟ್ಟು ಕೊಂಡು ಬೇರೆ ಸೀರೆಯನ್ನುಟ್ಟು ಸಿದ್ಧಳಾದಳು. ಇಬ್ಬರೂ ಬೀಚಿಗೆ ಹೋದರು.

ಬೊಂಬಾಯಿನಿಂದ ವಿಜಯನು ತಂತೀ ಕೊಟ್ಟನು. ತಕ್ಷಣ ಹೊರಟು ಬರಬೇಕೆಂದು ಕರೆ ಬಂದಿತ್ತು. ಭಟ್ಟನು ಕಲ್ಯಾಣಿಯೊಡನೆ ಹೇಳಿ ಅಪ್ಪಣೆ ಪಡೆದನು.

ಲಕ್ಷ್ಮಿಯೊಡನೆ ಪ್ರಸ್ತಾಪ ಮಾಡಿದನು. " ಲಕ್ಷ್ಮೀ ! ಒಂದು ವಾರದೊಳಗಾಗಿ ಹಿಂತಿರುಗಿ ಬರೋಣ. ನೀನೂ ಬಂದು ಬಿಡು. ನಾನೊಬ್ಬನೇ ಪ್ರಯಾಣ ಮಾಡಲು ಬೇಸರವಾಗುತ್ತದೆ " ಎಂದು ಹೇಳಿದನು.

ಲಕ್ಷ್ಮಿಯು " ನನಗೂ ಅದೇ ಆಸೆ ! ಆದರೆ ನಾನು ಈ ಬಾರಿ ಒಬ್ಬಳೇ ಬರುವುದಿಲ್ಲ. ಅತ್ತಿಗೆಯನ್ನೂ ಮಾಧುವನ್ನೂ ಕರೆದುಕೊಂಡೇ ಹೋಗಬೇಕು. ಮಾಧುವಿಗೆ ರಜಾ ಬರುತ್ತಲೇ ಹೊರಡುತ್ತೇನೆ. ನನಗಿನ್ನೂ ಶರೀರ ಸ್ಥಿತಿಯು ಪೂರ್ಣ ಗುಣವಾಗಿಲ್ಲ " ಎಂದು ಹೇಳಿದಳು.

ಭಟ್ಟನು " ಲಕ್ಷ್ಮಿ! ಹಾಗಾದರೆ ಈಗ ನೀನು ಹೊರಡುವುದಿಲ್ಲ " ಎಂದನು.

ಲಕ್ಷ್ಮಿಯು " ಈಗ ಇಲ್ಲ " ಎಂದು ತಲೆ ಅಲ್ಲಾಡಿಸುತ್ತಾ " ಬೇಗ ಬಂದು ಬಿಡಿ ! ಮತ್ತೊಮ್ಮೆ ಎಲ್ಲರೂ ಒಟ್ಟಿಗೆ ಪ್ರಯಾಣ ಮಾಡೋಣ " ಎಂದಳು.

ಮೂರನೆಯ ದಿನ ಪ್ರಾತಃಕಾಲ ಪ್ರಯಾಣಕ್ಕೆ ತಿಂಡಿಗಳನ್ನು ಮಾಡಿಸಿದರು. ಹಣ್ಣುಗಳನ್ನು ತಂದಿಟ್ಟರು. ಲಕ್ಷ್ಮಿಯು ಬೇಕಾದ ಬಟ್ಟೆಗಳನ್ನೆಲ್ಲಾ ಅಣಿ ಮಾಡಿ ಚರ್ಮದ ಪೆಟ್ಟಿಗೆಯಲ್ಲಿಟ್ಟಳು. ಭಟ್ಟನು ಸ್ನಾನ ಮಾಡಿ ಕಾಫಿಯನ್ನು ತೆಗೆದುಕೊಂಡು ಪ್ರಯಾಣಕ್ಕೆ ಸಿದ್ಧನಾದನು. ವಿಜಯನೂ ಸ್ನಾನಾದಿಗಳನ್ನು ತೀರಿಸಿ ಪ್ರಯಾಣಕ್ಕೆ ಸಿದ್ಧನಾದನು. ಸಾಮಾನುಗಳನ್ನೆಲ್ಲಾ ಡ್ರೈವರನು ಕಾರಿನಲ್ಲಿಟ್ಟನು. ಭಟ್ಟನೂ ಲಕ್ಷ್ಮಿಯೂ ಕಾರಿನಲ್ಲಿ ಕುಳಿತು ರೈಲ್ವೆ ಸ್ಟೇಷನ್ನಿಗೆ ಹೊರಟರು.

ಇವರು ಹೋಗಿ ಸೇರುವ ಮುಂಚೆಯೇ ಸ್ವಾಮಿ ದಂಪತಿಗಳೂ ಮಾಧುವೂ ರೈಲ್ವೆ ಪ್ಲಾಟ್ ಫಾರಂಗೆ ಬಂದು ಬಿಟ್ಟಿದ್ದರು. ಭಟ್ಟನು ಕಾರಿನಿಂದ ಇಳಿದು ಲಕ್ಷ್ಮಿಯೊಡನೆ ಪ್ಲಾಟ್ ಫಾರಂಗೆ ಹೋದನು. ಗಾಡಿಯು ಸಿದ್ಧವಾಗಿತ್ತು. ಫಸ್ಟ್‌ಕ್ಲಾಸ್ ಗಾಡಿಯಲ್ಲಿ ಭಟ್ಟನಿಗಾಗಿ ರಿಜರ್ವ್ ಮಾಡಿದ್ದ ಸೀಟುಗಳಲ್ಲಿ ಕೈಪೆಟ್ಟಿಗೆ ಹಾಸಿಗೆಗಳನ್ನು ಇಡಿಸಿದರು. ಉಳಿದ ಸಾಮಾನುಗಳನ್ನೆಲ್ಲಾ ಬೆಂಚಿನ ಕೆಳಗಡೆ ಜೋಡಿಸಿಟ್ಟರು. ಗಾಡಿಯು ಹೊರಡುವವರೆಗೆ ಎಲ್ಲರೂ ಮಾತನಾಡುತ್ತಿದ್ದರು. ರೈಲು ಹೊರಡುವ ಹೊತ್ತಾಯಿತು. ಎಲ್ಲರೂ ಕೆಳಗಿಳಿದರು. ರೈಲು ಹೊರಟೇ ಬಿಟ್ಟಿತು. ಆ ಗಾಡಿಯು ಪ್ಲಾಟ್ ಫಾರಂ ಬಿಟ್ಟು ಹೋಗುವವರೆಗೆ ಲಕ್ಷ್ಮಿಯು ಆ ಗಾಡಿಯ ಕಡೆಗೇ ನೋಡುತ್ತಿದ್ದಳು. ಅನಂತರ ಎಲ್ಲರೂ ಬೃಂದಾವನಕ್ಕೆ ವಾಪ್ಸು ಹೋದರು.

## ೬

ಆ ಗಾಡಿಯಲ್ಲಿ ಮತ್ತಿಬ್ಬರು ಪ್ರಯಾಣಿಕರಿದ್ದರು. ಅವರಲ್ಲೊಬ್ಬರು ಮದರಾಸಿನ ಪತ್ರಕರ್ತರು. ಅವರು ತಮ್ಮ ಮಗಳೊಂದಿಗೆ ಪ್ರಯಾಣ ಮಾಡುತ್ತಿದ್ದರು. ರೈಲು ಹೊರಡುತ್ತಲೇ ಪರಸ್ಪರ ಪರಚಯ ಮಾಡಿಕೊಂಡರು. ಆ ಪತ್ರಕರ್ತರು ಇನ್ನೂ ಪತ್ರಿಕೆಯನ್ನು ಹೊರಡಿಸಿರಲಿಲ್ಲ. ಪತ್ರಿಕೆಯನ್ನು ಹೊರಡಿಸಬೇಕೆಂಬ ಉತ್ಸಾಹದಲ್ಲಿದ್ದರು. ಅವರ ಜೊತೆಯಲ್ಲಿದ್ದ ಆ ಹುಡುಗಿಗೆ ಸುಮಾರು ೧೮–೨೦ ವರುಷಗಳು ಇರಬಹುದು. ಅವಳು ಹಿಜಾರವನ್ನೂ ಅಂಗಿಯನ್ನೂ ಧರಿಸಿದ್ದಳು. ತಲೆ ಬಾಬ್‌ಕಟ್ ಮಾಡಿತ್ತು. ಅವಳ ಹೆಸರು ಕಮಲಾ. ಅವಳು ಅಲಹಾಬಾದಿನಲ್ಲಿ ಕಾಲೇಜಿನಲ್ಲಿ ಓದುತ್ತಿದ್ದಳು. ಅವಳ ಗೆಳತಿಯರು ಅದೇ ರೈಲಿನಲ್ಲಿ ಇಂಟರ್ ಗಾಡಿಯಲ್ಲಿ ಪ್ರಯಾಣ ಮಾಡುತ್ತಿದ್ದರು. ಈ ಕಮಲೆಯು ಪದೇ ಪದೇ ಇಳಿದು ಆ ಗೆಳತಿಯರು ಕುಳಿತಿದ್ದ ಗಾಡಿಗೆ ಹೋಗಿ ಬರುತ್ತಿದ್ದಳು. ಅವರೊಡನೆಯೇ ಒಂದೆರಡು ಸ್ಟೇಷನ್‌ಗಳನ್ನು ಕಳೆದು ಪುನಃ ವಾಪಸು ಬರುತ್ತಿದ್ದಳು.

ಭಟ್ಟನು ಕೊಂಚ ಕೊಂಚವಾಗಿ ಅವರ ಪರಿಚಯ ಮಾಡಿಕೊಳ್ಳಲು ಪ್ರಯತ್ನಿಸಿದನು. ಅವರು ಆಂಧ್ರ ದೇಶದವರೆಂದೂ, ಸೆಂಟ್ರಲ್ ಅಸೆಂಬ್ಲಿಯ ಮೆಂಬರೆಂದೂ ಗೊತ್ತಾಯಿತು. ಅದಕ್ಕೆ ತಕ್ಕ ಮಾತಿನ ಟೀವಿ, ಗತ್ತುಗಳೆಲ್ಲಾ ಇದ್ದುವು. ಭಟ್ಟನು ಅವರ ಸಮಾಚಾರವನ್ನು ಕೊಂಚ ಕೊಂಚವಾಗಿ ಅವರಿಂದಲೇ ತೆಗೆದನು. ಅವರು ಜವಹರಲಾಲರವರಿಗೆ ವಿಶೇಷ ಪರಿಚಯವುಳ್ಳ ಸ್ನೇಹಿತರೆಂದು ಹೇಳಿಕೊಂಡರು. ಜೈಲು ಮಾತು ಬಂತು. ಒಂದು ಬಾರಿಯೂ ಜೈಲಿಗೆ ಹೋದವರಲ್ಲವೆಂದು ಅವರ ಮಾತಿನಿಂದಲೇ ತಿಳಿಯಿತು.

ಭಟ್ಟನು "ಹಾಗಾದರೆ ನೀವು ಮಾಡೆರೇಟ್ ಪಕ್ಷದವರೋ ?" ಎಂದು ಅವರನ್ನು ಪ್ರಶ್ನೆ ಮಾಡಿದನು.

"ಮಾಡರೇಟ್ ಅಲ್ಲ. ಕಾಂಗ್ರೆಸ್ ಪಕ್ಷಕ್ಕೆ ಸೇರಿದನು. ಆದರೆ ಪದೇ ಪದೇ ಜೈಲಿಗೆ ಹೋಗುವ ಪ್ರೋಗ್ರಾಂ ನನಗಷ್ಟು ಸರಿಬೀಳುವುದಿಲ್ಲ" ಎಂದು ಹೇಳಿದರು.

ಭಟ್ಟನು "ಸರಿ. ನೀವು ಗಾಂಧಿಯ ಭಕ್ತರೋ ?" ಎಂದು ಕೇಳಿದನು.

"ಓಹೋ ! ಮೊದಲಿನಿಂದಲೂ ನಾನು ಮಹಾತ್ಮಾ ಗಾಂಧಿಯ ಭಕ್ತ. ನಾನು ಪ್ರಪಂಚವನ್ನೆಲ್ಲಾ ತಿರುಗಿದ್ದೇನೆ. ಮಹಾ ಮಹಾ ವ್ಯಕ್ತಿಗಳೊಡನೆ ಮಾತನಾಡಿದ್ದೇನೆ. ಗಾಂಧಿಗೆ ಸರಿಸಮರಾದವರು ಈ ಪ್ರಪಂಚದಲ್ಲಿ ಯಾರೂ ಇಲ್ಲ"

"ಈ ಸತ್ಯಾಗ್ರಹವನ್ನು ನೀವು ಒಪ್ಪುತ್ತೀರೋ ?"

"ಅದೇನು ಅಷ್ಟು ಸರಿಯಾದುದಲ್ಲ. ಆದರೆ ಇಂಡಿಯಾದಲ್ಲೆಲ್ಲಾ ಸತ್ಯಾಗ್ರಹವು ಬ್ರಹ್ಮಾಸ್ತ್ರವಾಗಿ ಪರಿಣಮಿಸಿದೆ. ಅದರ ವಿಷಯದಲ್ಲಿ ಚರ್ಚೆ ಮಾಡುವುದು ಅವಿವೇಕ"

ಭಟ್ಟನು ಕಮಲೆಯನ್ನು ಮಾತನಾಡಿಸಬೇಕೆಂದು ಕುತೂಹಲಪಡುತ್ತಿದ್ದನು. ಅವಳಿಗೂ ಈ ಜೊತೆಯ ಪ್ರಯಾಣಿಕನನ್ನು ಮಾತನಾಡಿಸಬೇಕೆಂಬ ಚಪಲವಿದ್ದಿತು. ಯಾರು ಮೊದಲು ಮಾತನ್ನು ಎತ್ತಬೇಕು ? ಅಷ್ಟರಲ್ಲಿಯೇ ಆ ಸಮಸ್ಯೆಯು ಉಳಿದಿತ್ತು.

ಭಟ್ಟನು "ಇವರು ನಿಮ್ಮ ಮಗಳೋ?" ಎಂದು ಕೇಳಿದನು.

ಕಮಲೆಯ ವಾಗ್ಝರಿಯು ಆರಂಭವಾಯಿತು. ಅವಳು "ಹೌದು, ಅವರು ನಮ್ಮ ತಂದೆ. ನಿಮ್ಮ ಪರಿಚಯವನ್ನು ದಯವಿಟ್ಟು ಕೊಡುವಿರಾ. ನೀವೇನು ಕಾಂಗ್ರೆಸ್ಸಿನವರೋ" ಎಂದು ಕೇಳಿದಳು.

ಭಟ್ಟನು "ಅಲ್ಲ, ಅಲ್ಲ. ನಾನಿನ್ನೂ ಕಾಂಗ್ರೆಸ್ಸಿಗೆ ಸೇರಿಲ್ಲ" ಎಂದನು.

ಕಮಲೆಯು ನಕ್ಕು "ಇನ್ನಾವಾಗ ಕಾಂಗ್ರೆಸ್ಸಿಗೆ ಸೇರುತ್ತೀರಿ ? ಪೂರ್ಣ ಸ್ವರಾಜ್ಯವು ಬಂದ ಮೇಲೆಯೋ ?" ಎಂದು ಹಾಸ್ಯ ಮಾಡಿದಳು.

"ಮುಂದೆ ಸೇರುತ್ತೇನೆಯೋ ಏನೋ. ಈಗಂತೂ ಅಲ್ಲ"

"ಹಾಗಾದರೆ ನಿಮ್ಮ ಉದ್ಯೋಗವೇನು ?"

"ನಮ್ಮದು ಸಿನಿಮಾ ಚಿತ್ರಪಟಗಳ ತಯಾರಿಕೆ, ಹಂಚಿಕೆಯ ವ್ಯಾಪಾರ. ನನ್ನ ಹೆಸರು ಭಟ್"

ಕಮಲೆಯು ಕಣ್ಣರಳಿಸಿದಳು. ಅವಳಿಗೆ ಚಲನ ಚಿತ್ರಗಳೆಂದರೆ ಅತಿ ಆಸೆ. ಅವಳು ಓದುವ ಪುಸ್ತಕಗಳಿಗಿಂತಲೂ ಚಲನ ಚಿತ್ರದ ವಿಷಯವೇ ಅವಳಿಗೆ ಹೆಚ್ಚಾಗಿ ಗೊತ್ತಿದ್ದಿತು. ಸುಪ್ರಸಿದ್ಧರಾದ ಸಿನಿಮಾ ನಟಿಯರ ಹೆಸರುಗಳನ್ನು ಹೇಳುತ್ತಾ ಕಮಲೆಯು ಅವರ ಅಭಿನಯ, ಹಾಡುಗಾರಿಕೆ ಗಳನ್ನು ಹೊಗಳುತ್ತಿದ್ದಳು. ಅವಳ ತಂದೆಯವರು ಬಾತ್‌ರೂಂಗೆ ಹೋಗಿದ್ದರು.

ಭಟ್ಟನು ಕಮಲೆಯನ್ನು ಕುರಿತು "ಈ ಸಿನಿಮಾ ಪ್ರಪಂಚದಲ್ಲಿ ನಿಮಗೆ ಬಹಳ ಆಸಕ್ತಿ ಇರುವಂತಿದೆ. ಎಲ್ಲವೂ ಕರತಲಾಮಲಕವಾಗಿ ತಿಳಿದಿವೆ" ಎಂದನು.

ಅವಳು ತಲೆಯಲ್ಲಾಡಿಸುತ್ತಾ "ನೋಡಿ, ನೀವೆಷ್ಟೋ ಸ್ಟಾರ್‌ಗಳನ್ನು ಬಲ್ಲಿರಿ. ಒಬ್ಬರೂ ಮೇಲಿನ ಮಟ್ಟಕ್ಕೆ ಬರುವುದಿಲ್ಲವಲ್ಲಾ. ಅದೇಕೆ ಹೇಳು ವಿರಾ ?" ಎಂದಳು.

ಭಟ್ಟನು "ಅದೇನೂ ಇಲ್ಲ. ನಿಮ್ಮಂಥಹ ವಿದ್ಯಾವತಿಯರು, ಬುದ್ಧಿ ವಂತರು, ಸಿನಿಮಾ ಪ್ರಪಂಚದಲ್ಲಿ ಆಸಕ್ತಿಯನ್ನು ವಹಿಸಿದರೆ ನಮ್ಮ ವೃತ್ತಿಯು ಎಷ್ಟೋ ಮೇಲಕ್ಕೆ ಬರುತ್ತದೆ" ಎಂದು ಹೇಳಿದನು.

ಕಮಲೆಗೆ ಬಹಳ ಸಂತೋಷವಾಯಿತು. ಮುಂದೆ ಸಿನಿಮಾ ಪ್ರಪಂ

ಚದಲ್ಲಿ ತನಗೊಂದು ಉನ್ನತೋನ್ನತ ಸ್ಥಾನವಿದೆಯೆಂದು ಭಾವಿಸಿಕೊಂಡು ಸಂತೃಪ್ತಳಾದಳು.

ಅವಳ ತಂದೆಯವರು ಬಂದು ಕುಳಿತರು.

ರೈಲು ಮುಂದೆ ಮುಂದೆ ಓಡುತ್ತಿತ್ತು. ಮಾತುಗಳೂ ಮುಂದುವರಿಯುತ್ತಲೇ ಇತ್ತು.

ಕಮಲೆಯು ತನ್ನ ಪ್ರತಿಷ್ಠೆಯನ್ನು ಎಷ್ಟು ವ್ಯಕ್ತಪಡಿಸಬಹುದೋ ಅಷ್ಟನ್ನೂ ವ್ಯಕ್ತಪಡಿಸಿಕೊಂಡಳು. ಅವಳು ಇಂದಿರಾ ನೆಹರೂವಿನ ಸಹಾಧ್ಯಾಯಿಣಿಯಾಗಿದ್ದಳಂತೆ. ಕೃಷ್ಣ ಹತೀಸಿಂಗ್, ಶ್ರೀ ವಿಜಯಲಕ್ಷ್ಮಿಯವರನ್ನೂ ಬಲ್ಲಳಂತೆ. ಎಷ್ಟೋ ಬಾರಿ ಅವರ ಮನೆಗಳಿಗೆ ಹೋಗಿ ಬಂದಿದ್ದಾಳಂತೆ. ಇತ್ಯಾದಿ, ಇತ್ಯಾದಿ.

ಭಟ್ಟನು ಮಾತನಾಡದೇ ಮೌನವಾಗಿ ಕುಳಿತಿದ್ದನು.

ಇದನ್ನು ನೋಡಿ ಆ ಸಭ್ಯಗೃಹಸ್ಥರು "ಭಟ್ಟನಿಗೆ ಹೆಚ್ಚು ಪ್ರಪಂಚದ ಪರಿಜ್ಞಾನವಿಲ್ಲ. ಯಾರೋ ಶ್ರೀಮಂತರ ಮಗನಿರಬೇಕು" ಎಂದುಕೊಂಡರು.

ಕಮಲೆಯ ಕಲ್ಪನೆಯು ಬೇರೆಯಾಗಿದ್ದಿತು. "ಈ ತರುಣನು ವಿದ್ಯಾವಂತನಲ್ಲ. ವೇಷ ಭೂಷಣಗಳನ್ನೆಲ್ಲಾ ನವೀನ:ಕಾಲಕ್ಕೆ ತಕ್ಕಂತಿದೆ" ಎಂದು ಕೊಂಡಳು.

ಮಧ್ಯಾಹ್ನ ಭೋಜನದ ಹೊತ್ತು ಬಂತು. ಆ ಸಭ್ಯಗೃಹಸ್ಥರಿಗೆ ಬಟ್ಲರ್ ಭೋಜನವನ್ನು ತಂದಿಟ್ಟನು.

ಭಟ್ಟನು ಪೆಟ್ಟಿಗೆಯನ್ನು ತೆಗೆದು ರೊಟ್ಟಿ ಪಲ್ಯಗಳನ್ನು ತಟ್ಟೆಯಲ್ಲಿ ತೆಗೆದಿಟ್ಟನು. ಹಣ್ಣುಗಳನ್ನು ಕತ್ತರಿಸಿ ಚೂರು ಮಾಡಿ ಎರಡು ಬಟ್ಟಲುಗಳನ್ನಿಟ್ಟನು. ಟಿಫಿನ್ ಬಾಕ್ಸ್ ತೆಗೆದು ಮೊಸರನ್ನವನ್ನು ತೆಗೆದಿಟ್ಟನು.

ಇವರಷ್ಟಕ್ಕೆ ಇವರು, ಅವರಷ್ಟಕ್ಕೆ ಅವರು ಭೋಜನವನ್ನು ಪೂರೈಸಿದರು.

ಎಲ್ಲವೂ ಪೂರೈಸಿದ ಮೇಲೆ ಆ ಸಭ್ಯಗೃಹಸ್ಥರು ಭಟ್ಟನನ್ನು ಕುರಿತು " ನೀವು ಊಟವನ್ನೇ ಮಾಡಲಿಲ್ಲವಲಾ " ಎಂದು ಕೇಳಿದರು.

ಭಟ್ಟನು " ಪ್ರಯಾಣ ಮಾಡುವಾಗ ನಮ್ಮ ಊಟದ ಏರ್ಪಾಡು

ಇಷ್ಟೇ. ಹೋಟಲುಗಳ ಭೋಜನವು ಶುಚಿ ರುಚಿಯಿಂದಿರುವುದಿಲ್ಲ" ಎಂದು ಹೇಳಿದನು.

ಕಮಲೆಯು "ಅದು ನಿಜ. ಅದಕ್ಕಾಗಿಯೇ ನಾವು ಈ ಸ್ಪೆನ್ಸರ್ ಎಸ್ಟಾಬ್ಲಿಷ್‌ಮೆಂಟ್‌ಗೆ ವೈರ್ ಮಾಡಿ ಸ್ಪೆಷಲ್ ಏರ್ಪಾಡುಗಳನ್ನು ಮಾಡಿದ್ದೇವೆ. ಇದೆಲ್ಲಾ ಬರೀ ಸಸ್ಯಾಹಾರ. ಬಟ್ಲರನು ತಂದಿಟ್ಟ ಮಾತ್ರಕ್ಕೆ ಮಾಂಸದ ಬೆರಕೆಯಿದೆಯೆಂದು ತಿಳಿದುಕೊಳ್ಳಬೇಡಿರಿ" ಎಂದು ಹೇಳಿದಳು.

ಭಟ್ಟನು "ನೋಡಿ, ಮಿಸ್ ಕಮಲ. ಆಹಾರವೆಂದರೆ ಆಹಾರ. ಭೋಜನ ಅಷ್ಟೆ. ನಾನು ಯಾವ ಭೇದವನ್ನೂ ಎಣಿಸುವುದಿಲ್ಲ. ಅವರವರಿಗೆ ಪ್ರಿಯವಾದುದು ಅವರವರಿಗೆ! ನಿಮ್ಮ ಭೋಜನವು ನನಗೊಪ್ಪಿತು. ಅವರಲ್ಲಿ ಕೊಂಚವೂ ಆಕ್ಷೇಪಣೀಯಾಂಶವೇನೂ ಇಲ್ಲ. ನೀವೇಕೆ ಸಂಕೋಚಪಡುತ್ತೀರಿ"? ಎಂದನು.

ಕಮಲೆಯು ಚಕಿತಳಾದಳು. ಸುಸಂಸ್ಕೃತ, ಸ್ವಚ್ಛ ಇಂಗ್ಲೀಷ್ ಭಾಷೆ.

ಕಮಲೆಯು "ಸರಿ ಸರಿ! ನಿಮ್ಮ ಅಭಿಪ್ರಾಯವು ಸರಿಯಾಗಿದೆ" ಎಂದು ಹೇಳಿ ಗಾಡಿಯನ್ನಿಳಿದು ತನ್ನ ಗೆಳತಿಯರ ಕಂಪಾರ್ಟ್‌ಮೆಂಟಿಗೆ ಹೋದಳು. ಸಭ್ಯಗೃಹಸ್ಥನು ಹಾಸಿಗೆಯನ್ನು ಬಿಚ್ಚಿ ಮಲಗಿ ವಿಶ್ರಮಿಸಿಕೊಂಡನು.

ಆ ಗಾಡಿಯಲ್ಲಿದ್ದ ಮತ್ತೊಬ್ಬ ಪ್ರಯಾಣಿಕ ಅಮರನಾಥರಾಯ. ಅವನು ಪಾಂಡಿಚೇರಿಯಿಂದ ಬೊಂಬಾಯಿಗೆ ಹೊರಟನು. ಅವನು ಭಟ್ಟ ಮತ್ತು ಕಮಲೆಯರ ಮಾತುಗಳನ್ನು ಕೇಳುತ್ತಿದ್ದನು. ಮಧ್ಯಾಹ್ನ ಭೋಜನೋತ್ತರ ಕಮಲೆಯು ತನ್ನ ಗೆಳತಿಯರೊಡನೆ ಮಾತನಾಡಲು ಅವರ ಗಾಡಿಗೆ ಹೊರಟಳು.

ರಾಯ್ ಭಟ್ಟನನ್ನು ಮಾತನಾಡಿಸುತ್ತಾ "ಮಹಾಶಯರೆ! ನೀವಿಬ್ಬರೂ ದಕ್ಷಿಣ ದೇಶದವರು. ನೀವೆಲ್ಲಾ ಒಂದೇ ಜಾತಿಯವರೆಂದು ಕಾಣುತ್ತದೆ" ಎಂದನು.

"ಜಾತಿಯು ಅಷ್ಟೇನೂ ಮುಖ್ಯವಲ್ಲ! ಈ ಕಾಲದಲ್ಲಿ ಜಾತಿ ಕುಲಗಳ

ಮಾತು ವಿದ್ಯಾವಂತ ಸಮಾಜದಲ್ಲಿ ಅಷ್ಟಾಗಿ ಇರುವುದಿಲ್ಲ. ಕೆಲವರು ಮುಂದುವರಿದ ಜನ ಎಂದು ಕೊಳ್ಳುತ್ತಾರೆ. ಅವರ ಆಚಾರ ವ್ಯವಹಾರಗಳೆಲ್ಲಾ ಪಾಶ್ಚಾತ್ಯರ ಮಾದರಿ " ಎಂದು ಭಟ್ಟನು ಹೇಳಿದನು.

" ನಾವೆಲ್ಲಾ ಕೊಂಚ ಕೊಂಚ ಹಾಗೆಯೇ ಆಗಿದ್ದೇವೆ. ನಮ್ಮ ಪ್ರಾಚೀನ ಸಂಸ್ಕೃತಿಯನ್ನು ಮರೆತಿದ್ದೇವೆ. ಇದೆಲ್ಲಿಗೆ ಕೊನೆ ಮುಟ್ಟುತ್ತೋ ಹೇಳಲಾಗುವುದಿಲ್ಲ "

" ಹೌದರಿ ! ಅದೇನೋ ದೊಡ್ಡ ವಿಷಯ. ನಮ್ಮ ಸಂಸ್ಕೃತಿಯನ್ನು ಮರೆತು ಪಾಶ್ಚಾತ್ಯ ಅನುಕರಣ ಮಾಡುತ್ತಿದ್ದೇವೆಲ್ಲಾ—ಎಂದು ದುಃಖವಾಗುತ್ತದೆ. ಆದರೆ ಆ ನಾಗರಿಕತೆಯೇ ನಮಗೆ ಸೊಗಸುತ್ತದೆ. ಅದಕ್ಕೇನು ಮಾಡುವುದು ?"

" ನಾವು ಪಾಶ್ಚಾತ್ಯ ನಾಗರಿಕತೆಯಲ್ಲಿ ಮುಳುಗಿದ್ದೇವೆ. ಮಹಾತ್ಮ ಗಾಂಧಿಯಂತಹವರು ಮತ್ತೊಬ್ಬರು ಹುಟ್ಟಿ ಈ ಭಾರತ ವರ್ಷವನ್ನು ಮೇಲೆಕ್ಕೆತ್ತ ಬೇಕು "

ಅಷ್ಟರಲ್ಲಿ ರೈಲು ನಿಂತಿತು. ಅವರಿಬ್ಬರೂ ಟೀ ತರಿಸಿ ಕುಡಿದರು.

ಆ ಮೇಲೆ ಇಸ್ಪೀಟಾಟಕ್ಕೆ ಷುರು ಮಾಡಿದರು.

ಕಮಲೆಯು ಗೆಳತಿಯರ ಗಾಡಿಯಿಂದಿಳಿದು ಈ ಗಾಡಿಗೆ ಬಂದಳು. ಗಾಡಿಯು ಮುಂದೆ ಹೊರಟಿತು.

ಭಟ್ಟ ಮತ್ತು ರಾಯ್ ಇಬ್ಬರೂ ಇಸ್ಪೀಟು ಆಡುತ್ತಿದ್ದರು.

ಕಮಲೆಯು ನಿಂತುಕೊಂಡೇ ಆ ಆಟವನ್ನು ನಿರೀಕ್ಷಿಸುತ್ತಿದ್ದಳು.

ಭಟ್ಟನು, "ಮಿಸ್ ಕಮಲಾ. ನೀವೂ ಆಟಕ್ಕೆ ಸೇರುವಿರೇನು?" ಎಂದು ಕೇಳಿದನು.

ಅವಳು " ಅದಕ್ಕೇನು ಬೇಜಾರಾಗುತ್ತದೆ. ಆಡಬಹುದು " ಎಂದು ಹಿಂದೆ ಮುಂದೆ ನೋಡಿದಳು.

ರಾಯ್ " ನೀವು ನಮ್ಮಾಟವನ್ನು ನೋಡುತ್ತಿರುವಾಗಲೇ ನಿಮಗೆ ಆಟವು ಗೊತ್ತಿದೆಯೆಂದು ನಮಗೆ ಗೊತ್ತಾಯಿತು. ನೀವು ದೊಡ್ಡವರ ಎದುರಿನಲ್ಲಿ ಆಡುವಿರೋ ಇಲ್ಲವೋ ಎಂದು ನಾವು ಕರೆಯಲಿಲ್ಲ. ಅಷ್ಟೆ. ಕ್ಷಮಿಸಿರಿ " ಎಂದು ಹೇಳಿದನು.

ಕಮಲೆಯು "ನಮ್ಮ ತಂದೆಯವರು ಉದಾರಿಗಳು. ನಾವು ಬೇಕಾದ್ದು ಮಾಡಬಹುದು. ಅವರ ಮನಸ್ಸಿನಲ್ಲಿಯೂ ಕಳಂಕವನ್ನಿಟ್ಟು ಕೊಳ್ಳುವರಲ್ಲ" ಎಂದು ಹೇಳಿದಳು.

ರಾಯ್ ತಾನು ಕುಳಿತಿದ್ದ ಸ್ಥಳವನ್ನು ಕಮಲೆಗೆ ಬಿಟ್ಟು ಎದುರಿಗಿಟ್ಟಿದ್ದ ಪೆಟ್ಟಿಗೆಯನ್ನು ಎಳೆದು ತನಗೆ ಆಸನವನ್ನು ಮಾಡಿಕೊಂಡನು.

ಮೂವರೂ ಆಟಕ್ಕೆ ಶುರು ಮಾಡಿದರು. ಆಟವು ಭರದಿಂದ ಸಾಗುತ್ತಿತ್ತು.

ಗೃಹಸ್ಥನು ಎದ್ದು ಕುಳಿತನು. ಸಿಗಾರನ್ನು ಹಚ್ಚಿದನು. "ಒಳ್ಳೆಯ ಆಲೋಚನೆ ಮಾ ಡಿ ದಿ ರಿ. ಹೊತ್ತು ಹೋಗುವುದಕ್ಕೆ ಸುಲಭವಾದ ಉಪಾಯ" ಎಂದನು.

ಟೀ ಸಮಯವು ಬಂದಿತು. ಬಟ್ಲರ್ ಬಂದು ಮುಖ ತೋರಿಸಿದನು. ಸಭ್ಯ ಗೃಹಸ್ಥನು ನಾಲ್ಕು ಟೀ ತರುವಂತೆ ಸನ್ನೆ ಮಾಡಿದನು. ಮುಂದಿನ ಸ್ಟೇಷನ್‌ನಲ್ಲಿ ಟೀ ಬಂದಿತು. ಕಮಲೆಯು ಎದ್ದು ಟೀ ಬೆರೆಸಿ ಎಲ್ಲರಿಗೂ ಕೊಟ್ಟಳು. ನಾಲ್ವರೂ ಟೀ ಕುಡಿಯಲಾರಂಭಿಸಿದರು. ಅಷ್ಟು ಹೊತ್ತಿಗೆ ಪರಿಚಯವು ಹೆಚ್ಚಾಗಿದ್ದಿತು.

ಕಮಲೆಯು "ಭಟ್ಟರೇ! ನೀವು ಈ ಟೀಯನ್ನಾದರೂ ಕುಡಿಯುತ್ತೀರೋ ಇಲ್ಲವೋ ಎಂದು ನನಗೆ ಸಂಶಯವಾಗಿದ್ದಿತು" ಎಂದಳು.

ಭಟ್ಟನು "ಸಂಶಯಕ್ಕೆ ಕಾರಣವೇನು?" ಎಂದನು.

ಕಮಲೆಯು "ಏನೂ ತಿಳಿದುಕೊಳ್ಳ ಬೇಡಿರಿ. ನಿಮ್ಮ ಹೆಸರು ಸ್ವಲ್ಪ ಪ್ರಾಚೀನ ಪಂಥದ ಸೂಚನೆಯನ್ನು ಕೊಡುತ್ತದೆ" ಎಂದು ನಕ್ಕಳು.

ಭಟ್ಟನು ನಗುತ್ತಾ "ಹೌದು, ಹೌದು. ಆ ಹೆಸರನ್ನು ನೋಡಿ ಅನೇಕರು ಮೋಸ ಹೋಗುತ್ತಾರೆ. ವೇಷವನ್ನು ನೋಡಿ ಕೆಲವರು ಮೋಸ ಹೋಗುವುದೂ ಉಂಟು. ಈ ನಿಮ್ಮ ತೀರ್ಥರೂಪರು ಇಲ್ಲಿಲ್ಲದಿದ್ದರೆ ನಿಮ್ಮನ್ನು ಯಾರಾದರೂ ಐರೋಪ್ಯ ತರುಣಿಯೆಂದೇ ಭಾವಿಸುತ್ತಿದ್ದರು" ಎಂದನು.

ಕಮಲೆಯು ನಕ್ಕಳು.

ಸಭ್ಯಗೃಹಸ್ಥನು "ಹೆಸರಿನಲ್ಲಿಯೂ ವೇಷ ಭೂಷಣಗಳಲ್ಲಿಯೂ

ಏನೂ ಇಲ್ಲ. ನಾವು ಈ ಭೇದಗಳನ್ನೆಲ್ಲಾ ತೊರೆದು ಒಂದು ಉತ್ತಮ ಜನಾಂಗವೆನ್ನಿಸಿಕೊಳ್ಳಬೇಕು. ಈಗ ರಾಷ್ಟ್ರೀಯತೆಯ ಸಂಕೋಚ ಭಾವವು ಅಳಿದು ಹೋಗಿ ಅಂತರ ರಾಷ್ಟ್ರೀಯ ವಿಶಾಲ ಭಾವನೆಯು" ಬರುತ್ತಿದೆ ಎಂದು ಹೇಳಿದನು.

ಭಟ್ಟನನ್ನು ಕುರಿತು "ಮಿ॥ ಭಟ್. ನೀವು ಯಾವ ವಿಶ್ವವಿದ್ಯಾಲಯದಲ್ಲಿ ತಯಾರಾದವರು" ಎಂದು ಆ ಗೃಹಸ್ಥನು ಕೇಳಿದನು.

ಭಟ್ಟನು "ನಮಗೆ ಬೇರೆ ಯಾವುದಿದೆ? ಮದರಾಸು ವಿಶ್ವವಿದ್ಯಾಲಯ" ಎಂದನು.

"ನೀವು ಕನ್ನಡಿಗರೆಂದು ತೋರಿತು. ಮೈಸೂರಿನ ವಿಶ್ವವಿದ್ಯಾಲಯದ ಪದವೀಧರರಿರಬಹುದೇನೋ ಎಂದು ಸಂಶಯ ಬಂದಿತು"

"ಮೈಸುರು-ಮದರಾಸು ಎಲ್ಲಾ ಒಂದೇ. ನಾನು ಮಂಗಳೂರಿನವನು. ಮೊದಲು ಅಲ್ಲಿ ಕಲಿತೆನು. ಅನಂತರ ಮದರಾಸಿಗೆ ಹಾರಿದೆನು. ಅಷ್ಟೆ"

"ಎಷ್ಟೇ ಆಗಲಿ, ಮದರಾಸ್ ವಿಶ್ವವಿದ್ಯಾಲಯವೇ ಶ್ರೇಷ್ಠ"

ಭಟ್ಟನಿಗೆ ಸ್ವಲ್ಪ ಚುರುಕು ಮುಟ್ಟಿದಂತಾಯಿತು. "ಸ್ವಾಮಿ ತಮ್ಮ ವಯಸ್ಸು, ತಮ್ಮ ದೊಡ್ಡಸ್ಥಿಕೆ, ಪ್ರಪಂಚದ ಅನುಭವ ಎಲ್ಲ ವಿಷಯಗಳಲ್ಲಿಯೂ ನನಗೆ ಬಹಳ ಗೌರವವಿದೆ. ಆದರೂ ನಾನು ಹೇಳುತ್ತೇನೆ, ಕೇಳಿರಿ. ಮೈಸೂರು ವಿಶ್ವವಿದ್ಯಾಲಯವು ಮದರಾಸನ್ನು ಮೀರಿಸುತ್ತದೆ. ಐ. ಸಿ. ಎಸ್. ಪರೀಕ್ಷೆಗಳಲ್ಲಿ ನೋಡಿರಿ. ಪ್ರತಿಯೊಂದು ಬಾರಿಯೂ ಮೈಸೂರಿನವರೊಬ್ಬರಿಗೆ ರ್‍ಯಾಂಕ್ ಬಂದೇ ಬರುತ್ತದೆ. ಇಂಗ್ಲೆಂಡ್ ವಿಶ್ವವಿದ್ಯಾಲಯಗಳಲ್ಲಿ ನೋಡಿರಿ. ಅಲ್ಲಿಯೂ ಮೈಸೂರಿನವರು ಒಂದು "ಮಾರ್ಕ್" ಮಾಡುತ್ತಾರೆ. ನಾನು ಹೇಳುತ್ತೇನೆ, ಕೇಳಿರಿ. ನಿಮ್ಮ ಮಗಳನ್ನು ಏಕೆ ಅಲಹಾಬಾದ್ ಯೂನಿವರ್ಸಿಟಿಗೆ ಸೇರಿದ್ದೀರೋ ನಾನರಿಯೆ. ಮೈಸೂರಿಗೆ ಕಳುಹಿಸಿರಿ-ಎಂದು ನಾನು ಧೈರ್ಯವಾಗಿ ಸಲಹೆ ಮಾಡಬಲ್ಲೆ" ಎಂದನು.

ಕಮಲೆಯು "ಮೈಸೂರು, ಬೆಂಗಳೂರುಗಳು ಬಹಳ ಚೆನ್ನಾಗಿವೆ.

ನನಗೂ ಅಲ್ಲಿ ಹೋಗಿ ಕೆಲವು ದಿವಸಗಳಿರಬೇಕೆಂದು ಆಶೆಯಿದೆ. ನೀವು ನಮ್ಮ ತಂದೆಯವರಿಗೆ ಒಳ್ಳೆ ಶಿಫಾರ್ಸು ಮಾಡಿದಿರಿ " ಎಂದು ಹೇಳಿದಳು.

ಆ ಸಭ್ಯಗೃಹಸ್ಥರು ತಿರುಗಿಬಿಟ್ಟರು. " ಮೈಸೂರನ್ನು ಅವಹೇಳನ ಮಾಡಲಿಲ್ಲ. ಸರ್. ಎಂ. ವಿ ರವರನ್ನು ನಾನು ಬಲ್ಲೆ. ಸರ್ ಮಿರ್ಜಾರವ ರೆಂದರೆ ನನಗೆ ಬಹಳ ವಿಶ್ವಾಸ. ಭಾರತದಲ್ಲೆಲ್ಲಾ ಅವರು ಕೀರ್ತಿಯನ್ನು ಗಳಿಸಿದ್ದಾರೆ. ರಾಜಾಜಿಯವರು ಬೆಂಗಳೂರು ಕಾಲೇಜಿನ ವಿದ್ಯಾರ್ಥಿಗ ಳೆಂದು ಕೇಳಿದ್ದೇನೆ. ನಾನು ಮದರಾಸ್ ಮೈಸೂರುಗಳನ್ನು ಒಂದಾಗಿಟ್ಟು ಕೊಂಡೇ ಹೇಳಿದೆನು " ಎಂದು ಹೇಳಿದರು.

ಭಟ್ಟನು " ಸ್ವಾಮಿ. ತಾವು ಹೊಸ ಪತ್ರಿಕೆಯನ್ನು ಹೊರಡಿಸಬೇ ಕೆಂದು ಹೇಳಿದಿರಲ್ಲಾ. ಇವತ್ತು ಮದರಾಸಿನಲ್ಲಿ ಹಿಂದು, ಎಕ್ಸ್‌ಪ್ರೆಸ್‌ಗಳ ಪೈಪೋಟಿಯೊಡನೆ ನಿಲ್ಲುವುದು ಕಷ್ಟವಲ್ಲವೆ ?" ಎಂದನು.

ಆ ಗೃಹಸ್ಥನು " ಹಿಂದು ಕನ್ಸರ್ವೆಟಿವ್ ಪತ್ರಿಕೆ. ಎಕ್ಸ್‌ಪ್ರೆಸ್ ಪತ್ರಿಕೆಯು ಮಾರ್ವಾಡಿ ದೊಡ್ಡ ಮನುಷ್ಯರ ಕೈಯಲ್ಲಿದೆ. ಅದು ಹೇಗೆಂ ದರೆ ಹಾಗೆ ! ನವೀನ ಮಾರ್ಗದಲ್ಲಿ ಉದಾರ ಭಾವನೆಯಿಂದ ಹೊರಡುವ ಪತ್ರಿಕೆಯೊಂದು ಬೇಕೇ ಬೇಕು. ನನಗೆ ಭಾರತದ ಮಹಾ ಮಹಾ ವ್ಯಕ್ತಿ ಗಳ ಅಭಿಮಾನವಿದೆ. ನಾನು ಹಣ ಗಳಿಸುವುದಕ್ಕಾಗಿ ಪತ್ರಿಕೆ ಮಾಡುವು ದಿಲ್ಲ. ಉತ್ತಮ ದರ್ಜೆಯ ಪತ್ರಿಕಾಲಯದ ಸ್ಥಾಪನೆಯೇ ನನ್ನ ಧ್ಯೇಯ" ಎಂದನು.

ಭಟ್ಟನು " ಅದೇನೋ ಸರಿ. ಪತ್ರಿಕಾಲಯಕ್ಕೆ ದುಡ್ಡು ಚೆನ್ನಾಗಿ ಬಂದರೆ ಪತ್ರಿಕೆಯು ಬೆಳೆಯುವುದು. ದೊಡ್ಡ ಮನುಷ್ಯರ ಅಭಿಮಾನದಿಂದ ಪತ್ರಿಕೆಯು ಬೆಳೆಯುವುದಿಲ್ಲ " ಎಂದನು

ಆ ಸಭ್ಯಗೃಹಸ್ಥರು " ವಾದ ಮಾಡುವುದರಿಂದೇನು ಫಲ. ಮಾಡಿ ತೋರಿಸುತ್ತೇನೆ. ನಿಮ್ಮಂಥಾ ದುಡ್ಡಿನವರು ನನಗೆ ಬೆಂಬಲವಾಗಿ ಬಂದು ಸಹಾಯ ನೀಡುತ್ತಾರೆಂದು ನನಗೆ ನಂಬುಗೆ ಇದೆ " ಎಂದು ಹೇಳಿದರು.

ಹೀಗೆಯೇ ಅನೇಕ ವಿಷಯಗಳ ಮೇಲೆ ಮಾತುಗಳು ಬೆಳೆದವು. ಸಂಜೆಯಾಯಿತು. ಸಭ್ಯಗೃಹಸ್ಥನೂ ಅವರ ಮಗಳೂ ಭೋಜನ ಮಾಡಿ ದರು. ಭಟ್ಟನೂ, ರಾಯ್-ಸಹ ಫಲಹಾರ ಮಾಡಿದರು. ಎಲ್ಲರೂ

ಮಲಗಿದರು. ರಾತ್ರಿ ಯಾರಿಗೂ ಸರಿಯಾಗಿ ನಿದ್ದೆ ಬರಲಿಲ್ಲ. ಮಾತ ನಾಡಿದರೆ ಒಬ್ಬರೊಬ್ಬರಿಗೆ ನಿದ್ರಾಭಂಗವಾಗುವುದೆಂಬ ಶಂಕೆಯಿಂದ ಯಾರೂ ಮಾತನಾಡಲಿಲ್ಲ.

ಬೆಳಕು ಹರಿಯಿತು. ಎಲ್ಲರೂ ಎದ್ದು ಮುಖ ತೊಳೆದುಕೊಂಡರು. ಟೀ ತರಿಸಿ ಕುಡಿದರು.

ಸಭ್ಯಗೃಹಸ್ಥನು ಭಟ್ಟನನ್ನು ಕುರಿತು "ಬೊಂಬಾಯಿನಲ್ಲಿ ನೀವೆಲ್ಲಿ ಇಳಿಯುವಿರಿ ?" ಎಂದು ಕೇಳಿದನು.

ಭಟ್ಟನು ನಮ್ರತೆಯಿಂದ "ಬೊಂಬಾಯಿನಲ್ಲಿ ನನಗೊಂದು ಮನೆ ಇದೆ. ನೀವೆಲ್ಲಿ ಇಳಿಯುತ್ತೀರಿ " ಎಂದು ಕೇಳಿದನು.

ಕಮಲೆಯು " ನಾವು ಟಾಜ್‌ನಲ್ಲಿ ಇಳಿಯುವುದು. ಯಾವಾಗಲೂ ಅಲ್ಲಿಯೇ. ಅದು ಬಹಳ ಚೆನ್ನಾಗಿರುತ್ತದೆ. ನಾಳೆ ನೀವು ನಮ್ಮ ಹೋಟ ಲಿಗೆ ಬಂದು ಭೇಟಿ ಕೊಡಬಾರದೇಕೆ " ಎಂದಳು.

ಭಟ್ಟನು " ಆಗಬಹುದು. ನನಗೆ ಎರಡು ಮೂರು ದಿನಗಳು ರಾತ್ರಿ ಹಗಲೂ ಕೆಲಸವಿದೆ. ಪುರುಸೊತ್ತೇ ಆಗುವುದಿಲ್ಲ. ಮತ್ತೊಂದು ಬಾರಿ ಎಲ್ಲಿಯಾದರೂ ತಮ್ಮಗಳ ದರ್ಶನ ಮಾಡುತ್ತೇನೆ " ಎಂದು ಹೇಳಿದನು.

ಕಮಲೆಯು ಒಪ್ಪಿದಳು. ಭಟ್ಟನ ಅಡ್ರಸ್ಸನ್ನು ತೆಗೆದುಕೊಂಡಳು. ಅಷ್ಟು ಹೊತ್ತಿಗೆ ಮತ್ತೊಂದು ಬಾರಿ ಟೀ ತರಿಸಿ ಎಲ್ಲರೂ ಕುಡಿದರು.

ಸಭ್ಯಗೃಹಸ್ಥನು ಪೆಟ್ಟಿಗೆಯನ್ನು ತೆಗೆದು ತನ್ನ ಪತ್ರಿಕೆಯ ಪ್ರಾಸ್ಪೆಕ್ಟ್‌ಸ್ ಮುಂತಾದುವುಗಳನ್ನೆಲ್ಲಾ ಭಟ್ಟನ ಕೈಗೆ ಕೊಟ್ಟನು.

ಭಟ್ಟನು " ಇದು ಪ್ರೈವೇಟ್ ಕಂಪನಿಯೆಂದು ಕಾಣುತ್ತದೆ " ಎಂದನು.

ಅವರು " ಹೌದು. ಪ್ರೈವೇಟ್ ಕಂಪನಿಯೇ. ಇಂಡಿಯಾ ದೇಶದಲ್ಲಿ ಪತ್ರಿಕೆಗಳಿಗೆ ಹೇಗೆಯೇ ಕಂಪನಿ ಮಾಡಬೇಕು. ಪ್ರೈವೇಟ್ ಕಂಪನಿ ಯನ್ನೇ ಮಾಡಬೇಕು " ಎಂದನು.

ಅಷ್ಟು ಹೊತ್ತಿಗೆ ಬೊಂಬಾಯಿನ ಪತ್ರಿಕೆಗಳೆಲ್ಲಾ ಫ್ಲಾಟ್ ಫಾರಂನಲ್ಲಿ ಬಂದಿದ್ದವು. ಎಲ್ಲರೂ ಪತ್ರಿಕೆಗಳನ್ನು ಕೊಂಡುಕೊಂಡರು. ಓದಲಾರಂಭಿ ಸಿದರು. ಹೊತ್ತು ಮೀರುತ್ತ ಬಂದ ಹಾಗೆಲ್ಲಾ ಬೇಜಾರು ಹತ್ತಿತು. ಒಬ್ಬ

ರೊಬ್ಬರಿಗೂ ಮಾತನಾಡುವುದು ಕೂಡಾ ಬೇಜಾರೆನಿಸಿತು. ಏನೋ ಒಂದೊಂದು ಮಾತು. ಮಧ್ಯಾಹ್ನ ಮೂರು ಗಂಟೆಗೆ ರೈಲು ಬೊಂಬಾಯನ್ನು ಸೇರಿತು.

ಪರಸ್ಪರ ಎಲ್ಲರೂ ಷೇಕ್ ಹ್ಯಾಂಡ್ ಮಾಡಿದರು. ಕಮಲಾ ಮತ್ತು ಅವಳ ತಂದೆ ಟ್ಯಾಕ್ಸಿಯನ್ನು ಮಾಡಿಕೊಂಡು ಟಾಜ್ ಹೋಟಲಿಗೆ ಹೋದರು.

ಭಟ್ಟನು ಉಪಚಾರ ಹೇಳಿ ಅಮರನಾಥ ರಾಯ್‌ನನ್ನು ತನ್ನ ಮನೆಗೆ ಕರದೊಯ್ದನು.

ಭಟ್ಟನು ದಾರಿಯಲ್ಲಿ ಹೋಗುತ್ತಾ "ನೋಡಿದಿರಾ ? ರಾಯ್. ಆ ಗೃಹಸ್ಥನ ಬಡಾಯಿ ಎಷ್ಟಿದೆ ? ಇಂಡಿಯಾದ ರಾಜಕೀಯವೆಲ್ಲವೂ ತನ್ನ ಜೇಬಿನಲ್ಲಿಯೇ ಇರುವಂತೆ ಭಾವಿಸಿದ್ದಾನೆ" ಎಂದನು.

ರಾಯ್ "ಹಾಗೆಯೇ ಈ ದೊಡ್ಡ ಮನುಷ್ಯರ ಭಾವನೆಗಳು. ಆ ಮಹಾತ್ಮನು ತಪಸ್ಸು ಮಾಡುತ್ತಾನೆ. ಇವರೆಲ್ಲರೂ ಅವನ ಹೆಸರು ಹೇಳಿ ಕಾಲ ಕಳೆಯುತ್ತಾರೆ" ಎಂದು ಹೇಳಿದನು.

ಭಟ್ಟನು "ಆ ಹುಡುಗಿಯನ್ನು ನೋಡಿದಿರಾ, ರಾಯ್. ಅವಳು ಭೂಮಿಯ ಮೇಲೆ ನಿಲ್ಲುವುದೇ ಇಲ್ಲ. ಆಕಾಶದಲ್ಲಿಯೇ ಹಾರುತ್ತಾಳೆ—" ಎಂದನು.

ರಾಯ್ ನಗುತ್ತಾ ತಲೆದೂಗಿದನು.

ಅವರಿಬ್ಬರೂ ಕಾರಿನಲ್ಲಿ ಕುಳಿತು ಲಕ್ಷ್ಮೀನಿವಾಸವನ್ನು ಸೇರಿದರು.

೭

ಲಕ್ಷ್ಮೀ ನಿವಾಸದಲ್ಲಿ ಮಹಡಿಯ ಮೇಲೆ ಭಟ್ಟನೂ ವಿಜಯನೂ ಮಾತನಾಡುತ್ತಾ ಕುಳಿತಿದ್ದರು.

“ ಕವಿರಾಜ ! ನನ್ನನ್ನು ಏಕಾಏಕಿ ಕರೆಸಿದ ಕಾರಣವೇನು ?

“ ನಾವು ಸುಮಾರು ಮೂರು ತಿಂಗಳ ಕಾಲ ನಮ್ಮ ಕೆಲಸವನ್ನು ನಿಲ್ಲಿಸಬೇಕಾಗಿದೆ. ಈಗ ಕೆಲವು ಸ್ಥಳಗಳಿಗೆ ಹೋಗಿ ಪಟಗಳನ್ನು ತೆಗೆದುಕೊಳ್ಳಬೇಕು. ನಮ್ಮ ಡೈರೆಕ್ಟರ್ ಟೇಕಾರಾಮರೂ, ಗೋಡ್‌ಬೋಲೆಯೂ ಆ ಸ್ಥಳಗಳನ್ನೆಲ್ಲಾ ನೋಡಿಕೊಂಡು ಬಂದಿದ್ದಾರೆ. ಅಲ್ಲಿ ಹವಾ ಚೆನ್ನಾಗಿಲ್ಲವೆಂದೂ ಮೂರು ತಿಂಗಳು ಕೆಲಸ ನಿಲ್ಲಿಸಬೇಕೆಂದೂ ಹೇಳುತ್ತಾರೆ ”

“ ನೀನು ಅದನ್ನೊಪ್ಪುವುದಾದರೆ ಸರಿ ! ಅದರಲ್ಲಿ ನನ್ನ ಸಮಾಲೋಚನೆಯೇನು ಬೇಕು ?”

“ ನಾನೇ ಎಲ್ಲವನ್ನೂ ಮಾಡಿ ಪೂರೈಸುತ್ತಿದ್ದೆ. ನಿನಗೊಬ್ಬ ಪಾಲುಗಾರರಿದ್ದಾರೆ. ಅವರಿಗೆ ಕರಾರ್ವಾಕಾ ಲೆಖ್ಖಗಳನ್ನು ಕೊಡಬೇಕು. ಇದೆಲ್ಲಾ ದೊಡ್ಡ ಜವಾಬ್ದಾರಿ. ಅದಕ್ಕಾಗಿ ನಿನ್ನನ್ನು ಬರಮಾಡಿದೆ ”

" ಹಾಗೆಯೇ ಮಾಡಬಹುದು "

ವಿಜಯನು ಎಲ್ಲಾ ವ್ಯವಸ್ಥೆಗಳನ್ನೂ ಮಾಡಿದನು.

ಭಟ್ಟನು ಪ್ರಭುರಾಜರ ಭೇಟಿ ಮಾಡಿ ವಿದ್ಯಮಾನಗಳನ್ನೆಲ್ಲಾ ತಿಳಿಸಿದನು.

ಪ್ರಭುರಾಜರು " ನಿಮ್ಮ ಏರ್ಪಾಡುಗಳೆಲ್ಲವೂ ಚೆನ್ನಾಗಿದೆ " ಎಂದು ಹೇಳಿದರು.

ಆ ದಿನ ಮಧ್ಯಾಹ್ನವೇ ವಿಮಲಾದೇವಿಯು ಬಂದು ಭಟ್ಟನ ಭೇಟಿ ಮಾಡಿದಳು.

ಭಟ್ಟನು " ವಿಮಲಾ ! ನಿಮಗೆಲ್ಲಾ ಮೂರು ತಿಂಗಳು ರಜಾ ಸಿಕ್ಕಿದೆ. ಈಗೇನು ಮಾಡುತ್ತೀ ?" ಎಂದಳು.

ವಿಮಲೆಯು " ನಾನು ಮದರಾಸಿಗೆ ಹೋಗಿ ಲಕ್ಷ್ಮೀದೇವಿಯವರ ಜೊತೆಯಲ್ಲಿರುವುದೆಂದು ನಿಶ್ಚಯ ಮಾಡಿದ್ದೇನೆ " ಎಂದಳು.

ಭಟ್ಟನು " ಹೂ , ಹಾಗೆ ಮಾಡು. ಅಲ್ಲಿ ಕಲ್ಯಾಣಿಯವರು ನಿನಗೊಬ್ಬ ಗಂಡನನ್ನು ಹುಡುಕಿ ನಮಗೆ ಲಗ್ನಪತ್ರಿಕೆ ಕಳಿಸಿ ಬಿಡುತ್ತಾರೆ" ಎಂದನು.

ವಿಮಲೆಯು ನಾಚಿಕೆಯಿಂದ ತಲೆ ತಗ್ಗಿಸಿದಳು.

ವಿಜಯನು "ವಿಮಲಾದೇವಿಯ ಮದುವೆಯೇನೋ ಆಗುತ್ತದೆ. ಅದಕ್ಕಾಗಿ ಕಲ್ಯಾಣಿಯವರು ಕಷ್ಟ ಪಡಬೇಕಾಗಿಲ್ಲ. ನೀನು ಪ್ರೋತ್ಸಾಹಿಸಬೇಕಾಗಿಲ್ಲ. ನಮ್ಮ ಚಿತ್ರಪಟವು ಪೂರೈಸುವುದೇ ತಡ" ಎಂದು ಹೇಳಿದನು.

ವಿಮಲೆಯು "ರಾಯರೇ ! ಈ ಭಟ್ಟರು ಯಾವಾಗಲೂ ಹಾಸ್ಯ ಪ್ರಕೃತಿಯವರು. ನೀವೂ ಹೀಗೆ ಹಾಸ್ಯಕ್ಕೆ ಮೊದಲು ಮಾಡಿಬಿಟ್ಟರೆ ನಾನೇನು ಮಾಡಲಿ ? ಎಂದಳು.

ವಿಜಯನು " ವಿಮಲಾದೇವಿ ! ನಾನು ಹಾಸ್ಯ ಮಾಡಿದರೂ ಅದು ನಿಜವಾಗಬಹುದು. ಮುಂದೆ ನೋಡೋಣ " ಎಂದು ನಕ್ಕನು.

ಭಟ್ಟನು, "ವಿಜಯ. ಈ ಹುಡುಗಿಯರೆಲ್ಲಾ ವಿಚಿತ್ರ ಹುಡುಗಿಯರು. ಈ ಪ್ರಪಂಚವನ್ನು ಅವರು ನೋಡುವ ದೃಷ್ಟಿಯೇ ಬೇರೆ ! ಹಾಲಿನಂಥಾ ಮನಸ್ಸು !

"ನೋಡು ! ನಾನು ಮದರಾಸಿನಿಂದ ಬರುವಾಗ ರೈಲಿನಲ್ಲಿ ಒಬ್ಬ ತರುಣಿ - ನಮ್ಮ ಗಾಡಿಯಲ್ಲೇ ಬಂದಳು. ಅವಳ ಹೆಸರು ಕಮಲಾ. ಕಾಲೇಜಿನಲ್ಲಿ ಓದಿದ್ದಾಳಂತೆ. ಏನು ಮಾತು ! ಏನು ಮಾತು - ಎನ್ನು ತ್ತೀಯೆ ಎಂಥಾ ಆಕಾರ ! ಎಷ್ಟು ರೂಪ ! ಆ ಕಣ್ಣುಗಳೋ ?" ಎಂದನು

ವಿಜಯನು "ಏನು ? ಆ ಹುಡುಗಿಯನ್ನು ನಮ್ಮ ಚಿತ್ರಪಠಕ್ಕೆ ಗೊತ್ತು ಮಾಡಿಕೊಂಡು ಬಂದಿದ್ದೀಯೇನು ?" ಎಂದನು.

"ಅಯ್ಯೋ ! ಹುಚ್ಚ. ಅವಳೇಕೆ ಈ ಚಿತ್ರಪಠಕ್ಕೆ ಬರುತ್ತಾಳಯ್ಯ ? ಅವಳೊಬ್ಬ ಮುಖಂಡನ ಮಗಳು. ಅವಳ ತಂದೆ ದೊಡ್ಡ ಪತ್ರಕರ್ತನಂತೆ. ಅವಳು ಯಾವನಾದರೊಬ್ಬ ದೊಡ್ಡ ಪದವೀಧರನನ್ನು ಮದುವೆ ಯಾಗುತ್ತಾಳೆ"

"ಓಹೋ . ಹಾಗೇನು ? ಹಾಗಾದರೆ ಅವಳನ್ನೇಕೆ ಇಷ್ಟು ಹೊಗ ಳುತ್ತಿ ? ಈ ವಿಮಲಾ ದೇವಿಯೊಡನೆ ಅವಳನ್ನೇಕೆ ಹೋಲಿಸಿದೆ ? ನನ್ನೊ ಡನೆ ಅವಳನ್ನು ಇಷ್ಟು ವರ್ಣನೆ ಮಾಡುವ ಪ್ರಮೇಯವಾದರೂ ಏನಿತ್ತು?"

ಭಟ್ಟನು. "ಈ ಕಾಲದ ಹುಡುಗಿಯರು ನಾನಾ ವಿಧ-ಎಂದು ಹೇಳಿದೆ ನಯ್ಯಾ " ಎಂದನು.

ವಿಮಲಾ ದೇವಿಯು "ನೀವು ಯಾರನ್ನಾದರೂ ಪ್ರಶಂಸೆ ಮಾಡಿ ನಾಳೆ ದಿನ ಭಾನುವಾರ ನೀವಿಬ್ಬರೂ ನಮ್ಮ ಮನೆಗೇ ಭೋಜನಕ್ಕೆ ಬರಬೇಕು " ಎಂದನು.

ಭಟ್ಟನು "ಅದೇನು ? ವಿಮಲೆ. ನಾಳೆ ನಿಮ್ಮ ಮನೆಯಲ್ಲಿ ಏನಿದೆ ? ಏನು ಅಡಿಗೆ ?" ಎಂದನು.

ವಿಮಲೆಯು "ನಾಳೆ ದಿನ ನನ್ನ ಹುಟ್ಟಿದ ದಿನ ! ನೀವಿಬ್ಬರೂ ಬರಬೇಕು. ನಮ್ಮ ಗುರುಗಳೂ ಬರುತ್ತಾರೆ. ಅವರು ಸಾವಧಾನವಾಗಿ ಹಿಂದೂಸ್ಥಾನಿ ಸಂಗೀತವನ್ನು ತಮ್ಮೆದುರಿನಲ್ಲಿ ಹಾಡಬೇಕೆಂದು ಬಯಸು ತ್ತಾರೆ " ಎಂದಳು.

ಭಟ್ಟನೂ, ವಿಜಯನೂ ಒಪ್ಪಿಕೊಂಡರು.

ಭಟ್ಟನು "ಲಕ್ಷ್ಮೀದೇವಿಯವರಿಲ್ಲ. ನಮಗೇನು, ಯಾರು ಕರೆದರೆ ಅಲ್ಲೇ ಭೋಜನ ! ನಿತ್ಯವೂ ಒಂದೊಂದು ಕಡೆ ಆಗಲಿ " ಎಂದನು.

ವಿಮಲೆಯು “ ನಾನು ಮನೆಗೆ ಹೋಗಲು ಅಪ್ಪಣೆ ಕೊಡಿ ! ಸಂಗೀತದ ಉಪಾಧ್ಯಾಯರು ಕಾದಿರುತ್ತಾರೆ ” ಎಂದಳು.

ಭಟ್ಟನು “ ವಿಮಲೆ ! ನಾನು ಈ ದಿನ ಸಿನಿಮಾಕ್ಕೆ ಹೋಗಬೇಕೆಂದಿದ್ದೇನೆ. ನೀನೂ ವಿಜಯೇಂದ್ರ ರಾಯನೂ ಬಂದರೆ.ಹೋಗೋಣ” ಎಂದನು.

ವಿಮಲೆಯು ಸಮ್ಮತಿಯನ್ನು ಸೂಚಿಸಿದಳು.

ಪರಿಚಾರಕನು ಮೂವರಿಗೂ ಚಹಾ ತಂದಿಟ್ಟನು. ಅವರು ಚಹಾ ಕುಡಿದು ಹೊರಡಲು ಅನುವಾದರು. ಬಾಗಿಲಿನಲ್ಲಿ ಕಾರು ಸಿದ್ಧವಾಗಿತ್ತು. ಭಟ್ಟ–ವಿಮಲೆ–ವಿಜಯೇಂದ್ರರಾವ್ ಮೂವರೂ ಬಂದು ಕಾರಿನಲ್ಲಿ ಕುಳಿತರು.

ಭಟ್ಟನ ಸೂಚನೆಯಂತೆ ಕಾರು ದೋಭೀತಲಾದಲ್ಲಿ ಮೆಟ್ರೋ ಥಿಯೇಟರಿಗೆ ಹೋಯಿತು.

ಥಿಯೇಟರಿನಲ್ಲಿ ಗಡಿಬಿಡಿಯು ಸ್ವಲ್ಪ ಹೆಚ್ಚಾಗಿಯೇ ಇದ್ದಿತು. ವಿಜಯನು ಹೋಗಿ ಬಾಕ್ಸ್ ಟಿಕೆಟ್ಟಿಗೆ ಏರ್ಪಾಡು ಮಾಡಿದನು. ಮೂವರೂ ಹೋಗಿ ಬಾಕ್ಸಿನಲ್ಲಿ ಕುಳಿತರು. ಚಿತ್ರಪಟವು ಆರಂಭವಾಯಿತು. ಭಟ್ಟನು ಸ್ವಲ್ಪ ಹೊತ್ತು ಮೌನದಿಂದ ಚಿತ್ರವನ್ನು ನೋಡುತ್ತಿದ್ದು “ ವಿಜಯ. ಈ ಜನ್ಮದಲ್ಲಿ ಇಂಡಿಯಾದಲ್ಲಿ ಇಂತಹ ಚಿತ್ರಗಳನ್ನು ತಯಾರ್ಮಾಡಿ ನೋಡಲಾರವೇ ? ” ಎಂದನು.

ವಿಜಯನು “ ಅದೇನು ದೊಡ್ಡ ಮಾತು ? ಮಾಡಿಯೇ ಮಾಡುತ್ತೇವೆ. ನಾವೇ ಮಾಡಬಹುದು. ಇದರಲ್ಲೇನಿದೆ ?” ಎಂದನು.

ಭಟ್ಟನು “ ಯಾವುದು ? ನಿನ್ನ ಶಿವ–ಪಾರ್ವತಿಯು ಹಾಗಾಗುವುದೋ ?” ಎಂದನು.

ವಿಜಯನು “ಭಟ್ಟಾ. ಹುಚ್ಚಾಗಿ ಮಾತನಾಡ ಬೇಡ. ಶಿವ-ಪಾರ್ವತಿ-ಅದೆಲ್ಲಾ ಚಿತ್ರಪಟದಲ್ಲಿ ಬರಲೇಬಾರದು. ಇಂತಹ ಚಿತ್ರಗಳಾಗ ಬೇಕಾದರೆ ಅವು ಸಾಮಾಜಿಕ ಚಿತ್ರಗಳು. ಚಾರಿತ್ರಿಕ ಚಿತ್ರಗಳನ್ನು ಬಹುಮಟ್ಟಿಗೆ ಈ ಮಟ್ಟಕ್ಕೆ ತರಬಹುದು. ಪುರಾಣ, ದೇವರು, ದಿಂಡರು ಅದನ್ನೆಲ್ಲಾ ಮರತೇ ಬಿಡಬೇಕು ” ಎಂದನು.

ಭಟ್ಟನು " ವಿಮಲಾದೇವಿ. ಇಂತಹ ಚಿತ್ರದಲ್ಲಿ ನೀನು ನಟಿಯಾಗಿ ಅಭಿನಯಿಸಬಲ್ಲೆಯಾ ?" ಎಂದನು.

ವಿಮಲೆಯು ತನ್ನ ಎಡಗೈಯನ್ನು ಭಟ್ಟನ ಭುಜದ ಮೇಲೆ ಹಾಕಿ " ಅಭಿನಯಿಸದೇ ಏನು ? ನಿಮ್ಮ ಅನುಗ್ರಹವಿದ್ದರೆ ಇಂತಹ ಸಾಹಸ ಮಾಡಬೇಕೆಂದೇ ನಾನು ತಪಸ್ಸು ಮಾಡುತ್ತಿರುವುದು " ಎಂದಳು.

ವಿಜಯನು " ಸುಮ್ಮನಿರು ವಿಮಲಾದೇವಿ. ಇಂಥಾ ಪಠ ಮಾಡು ವುದಕ್ಕೆ ನಿನ್ನ ತೂಕದ ಚಿನ್ನವನ್ನು ಸುರಿಯಬೇಕು. ಎಲ್ಲದಕ್ಕೂ ಕಾಂಚನವು ಮೊದಲು. ಅದೊಂದಿದ್ದರೆ ಎಲ್ಲವನ್ನೂ ಮಾಡಬಹುದು. ಭಟ್. ನಿನ್ನಂತಹ ಚಿತ್ರ ನಿರ್ಮಾಪಕರೆಲ್ಲರೂ ಈ ಇಂಗ್ಲೀಷ್ ಚಿತ್ರ ಗಳನ್ನು ನೋಡಿ ಹೀಗೆ ಬಾಯಿ ಬಾಯಿ ಬಿಡುತ್ತಾರೆ. ತಾವು ಅದಕ್ಕಿಂತಲೂ ಸೊಗಸಾದ ಚಿತ್ರಗಳನ್ನು ಮಾಡುತ್ತೇವೆಂದು ಹೆಮ್ಮೆ ಕೊಚ್ಚುತ್ತಾರೆ. ಕೊನೆಗೆ ಅದು ಮೀರಾ, ಮಂಗಮ್ಮ, ಚಂದ್ರಲೇಖಗಳಾಗುತ್ತವೆ. ಅದನ್ನೇ ಪ್ರಶಂಸೆ ಮಾಡಿಕೊಳ್ಳುತ್ತಾರೆ. ಭಾರತದಲ್ಲಿ ಒಬ್ಬ ಧೀರನು ಮುಂದೆ ಬಂದು ಈ ದರ್ಜೆಯ ಚಿತ್ರವನ್ನು ಮಾಡುತ್ತೇನೆ. ಅದು ಈ ಮಟ್ಟಕ್ಕೆ ಬಾರದಿದ್ದರೆ ಸುಟ್ಟು ಹಾಕಿ ಬಿಡುತ್ತೇನೆ - ಎಂಬ ಸಂಕಲ್ಪದಿಂದ ಮುಂದೆ ಬರಬೇಕು. ಹಾಗೆ ಬರುವವನನ್ನು ನಾನು ಕಂಡೇ ಇಲ್ಲ. ಇಂತಹ ಮಾತು ಗಳಿಂದ ಏನು ಫಲ, ಬಿಡು. ದುಡ್ಡು ಕೊಟ್ಟಿದ್ದೇವೆ. ಚಿತ್ರ ನೋಡಿಕೊಂಡು ಮನೆಗೆ ಹೋಗುತ್ತೇವೆ. ಅಷ್ಟೇ ಸಾಕು. ಪುಣ್ಯ ಬಂತು " ಎಂದನು.

ಭಟ್ಟನು ಮೌನವಾಗಿ ಕುಳಿತನು.

ಇಂಟರ್‌ವಲ್ ಬಂದಿತು. ದೀಪಗಳು ಹತ್ತಿದುವು.

ವಿಜಯನು " ಭಟ್ಟ. ಹೊರಗೆ ಬರುವೆಯಾ ?" ಎಂದು ಕೇಳಿದನು.

ಭಟ್ಟನು ಅಲ್ಲೇ ಒಂದು ಸಿಗರೇಟ್ ಹತ್ತಿಸಿ ತಲೆಯಲ್ಲಾಡಿಸಿದನು.

ವಿಜಯನು ಹೊರಗೆ ಹೋದನು.

ಭಟ್ಟನು ವಿಮಲೆಯ ಕಡೆಗೆ ತಿರುಗಿಕೊಂಡು ನೋಡುತ್ತಿದ್ದನು.

ವಿಮಲೆಯು ನಾಚಿದಳು.

ಅವಳು ಮೆಲ್ಲನೆಯ ಧ್ವನಿಯಿಂದ " ಅದೇನು ಹಾಗೆ ದಿಟ್ಟಿಸಿ

ನೋಡುವಿರಿ. ನನ್ನ ಅಲಂಕಾರದಲ್ಲಿ ಏನಾದರೂ ತಪ್ಪಿದೆಯೋ ?" ಎಂದು ಕೇಳಿದಳು.

ಭಟ್ಟನು " ವಿಮಲೆ, ನಿನ್ನ ರೂಪ ಲಾವಣ್ಯಗಳು ಅಲಂಕಾರವನ್ನು ಲೆಕ್ಕಿಸುವಂತಿಲ್ಲ. ನಿನ್ನ ಅಂಗ ಸೌಷ್ಟವವು ಈ ನಟಿಗೆ ಸರಿಹೋಲುತ್ತದೆ. ಈ ಪಾಶ್ಚಾತ್ಯ ರಮಣಿಯರಂತೆ ದೇಹವನ್ನು ಇಟ್ಟುಕೊಂಡಿರುವ ಭಾರತ ನಟಿಯರು ಅಪರೂಪ. ನಿನಗೆ ಪ್ರಯತ್ನವಿಲ್ಲದೆಯೇ ಅವೆಲ್ಲವೂ ದೈವದತ್ತವಾಗಿದೆಯೆಂದು ನೋಡುತ್ತಿದ್ದೇನೆ '' ಎಂದನು.

ವಿಮಲೆಯು " ದೈವದತ್ತವಾದ ಸೌಭಾಗ್ಯವು ಎಷ್ಟೋ ಹೆಂಗಸರಿಗಿರುತ್ತದೆ. ನನಗೆ ನರ್ತನದಲ್ಲಿ ಬಹಳ ಆಸೆ. ಅದನ್ನು ಕಲಿಯಬೇಕಾದರೆ ಫಿಸಿಕಲ್ ಕಲ್ಚರ್‌ನ ಎಷ್ಟೋ ನಿಯಮಗಳನ್ನು ಅನುಸರಿಸಬೇಕು. ಅದೂ ಒಂದು ಸಾಧನೆ ಎಂದೇ ಹೇಳಬೇಕು " ಎಂದಳು.

" ಓಹೋ, ನಿನಗೆ ಫಿಸಿಕಲ್ ಕಲ್ಚರಿನ ಹುಚ್ಚು ಇದೆಯೋ ? ಅದನ್ನು ಯಾರು ಕಲಿಸುತ್ತಾರೆ. ? "

" ನಮ್ಮ ಚಾಚಾ ಇದ್ದಾರಲ್ಲ. ಅವರು ಬಹಳ ಮೆಹನತು ಮಾಡುತ್ತಾರೆ. "

" ಹೌದು. ಆ ಮುದುಕನನ್ನು ನೋಡಿದೆ, ಅವನ ಅಂಗಾಂಗಗಳು ಬಹಳ ಒಪ್ಪುವಂತಿದ್ದವು. ವಯಸ್ಸಾದರೂ ಮುಖದಲ್ಲಾಗಲೀ, ಕೈಕಾಲುಗಳಲ್ಲಾಗಲೀ ಸುಕ್ಕಿಲ್ಲ. ಅದೂ ಒಂದು ಸಾಧನೆಯೇ ಹೌದು. ''

ವಿಮಲೆಯು " ನಾನು ಸ್ಕೂಲಿನಲ್ಲಿರುವಾಗಲೇ ಬಹಳ ಅಂಗಸಾಧನೆ ಮಾಡುತ್ತಿದ್ದೆ. ಒಂದೆರಡು ಬಾರಿ ಸ್ಕೂಲಿನಲ್ಲಿ ಪ್ರೈಸ್ ಸಹಾ ಬಂದಿದೆ. ಅದೆಲ್ಲಾ ನಮ್ಮ ಚಾ ಚಾ ಉಪದೇಶ " ಎಂದು ಹೇಳಿದಳು.

ಅಷ್ಟರಲ್ಲಿ ಪಠವು ಪುನಃ ಆರಂಭವಾಯಿತು. ವಿಮಲೆಯು ಮತ್ತೂ ಸ್ವಲ್ಪ ಭಟ್ಟನ ಪಕ್ಕಕ್ಕೆ ಸರಿದು ಕುಳಿತುಕೊಂಡಳು. ವಿಜಯನೂ ಬಂದು ಕುಳಿತನು. ಭಟ್ಟನು ವಿಮಲೆಯ ಕೈ ಸವರುತ್ತಿದ್ದನು. ಅದೊಂದು ಅನಿರ್ವಚನೀಯವಾದ ಸ್ಪರ್ಶ ಸುಖಾನುಭವವಾಗಿತ್ತು. ವಿಜಯನಿಗೆ ಅತ್ತಕಡೆ ಗಮನವಿರಲಿಲ್ಲ. ಅವನಿಗೆ ಯಾವ ಅಸಹಜ ಭಾವನೆಯೂ ತೋರಲಿಲ್ಲ. ಆಟವು ಪೂರೈಸಿತು. ಮೂವರೂ ಹೊರಗೆ ಹೊರಟರು. ಕಾರಿನಲ್ಲಿ ಕುಳಿತುಕೊಂಡರು.

ಭಟ್ಟನು "ವಿಮಲಾದೇವಿ! ನಾನು ನಿನಗೊಂದು ಮಾತು ಹೇಳುವುದನ್ನು ಮರೆತೆ. ನಾವು ಮೊನ್ನೆ ಪ್ರಯಾಣ ಮಾಡಿ ಬರುವಾಗ ಆಂಧ್ರದ ಹುಡುಗಿಯೊಬ್ಬಳು ನಮ್ಮ ಜೊತೆಯ ಪ್ರಯಾಣಿಕಳಾಗಿದ್ದಳು. ಅವಳ ಪ್ಯಾಂಟ್ಸು, ಮೈ ಮೇಲಿನ ಜಾಕೆಟ್ಟು, ತಲೆಯ ಬಾಬ್‌ಕಟ್ಟು ಅವೆಲ್ಲವೂ ಈ ಚಿತ್ರಪಟದಲ್ಲಿ ನೋಡಿದ ನಟಿಯ ಹೋಲಿಕೆಯಂತೆಯೇ ಇದುವು" ಎಂದನು.

ವಿಜಯನು "ಭಟ್. ನಿನಗೆ ಬುದ್ಧಿಯು ಸರಿಯಾಗಿಲ್ಲ. ಅವಳೆಲ್ಲಿ? ಇವಳೆಲ್ಲಿ? ಎಲ್ಲಿಯ ಹೋಲಿಕೆ" ಎಂದನು.

ಭಟ್ಟನು "ವಿಜಯ, ಎಲ್ಲವನ್ನೂ ಅಲ್ಲಗಳೆಯುವುದು ನಿನ್ನ ಸ್ವಭಾವ. ಕನ್ಯೆಯ ಕಣ್ಣುಗಳು ವಿಶಾಲವಾಗಿದ್ದುವು. ಹುಬ್ಬುಗಳು ನೀಳವಾಗಿದ್ದುವು. ಮೂಗು ಎಳಸಾಗಿದ್ದಿತು ಅಧರಗಳು ಕೆಂಪಾಗಿದ್ದುವು ಕಪೋಲಗಳ ಥಳಥಳ್ಯವು ಹೊಳೆಯುತ್ತಿತ್ತು. ಎರಡುದಿನ ಜೊತೆಯಲ್ಲಿದ್ದು ನೋಡಿದ್ದೇನೆ. ಅವಳ ರೂಪಿಗೂ ಈ ಚಿತ್ರದ ನಟಿಗೂ ನನಗೆ ಭೇದವೇ ಕಂಡುಬರುವುದಿಲ್ಲ" ಎಂದನು.

ವಿಜಯನು "ಸ್ತ್ರೀಯರ ಸೌಂದರ್ಯವು ಎಷ್ಟೋ ವಿಧ ಅವರಷ್ಟಕ್ಕೆ ಅವರವರು ಚೆಂದ. ಹೆಂಗಸರು ಕನ್ನಡಿಯ ಮುಂದೆ ನಿಂತು ನೋಡಿಕೊಳ್ಳುವಾಗ ರಂಭೆ ಊರ್ವಶಿಯರಿಗಿಂತಲೂ ತಾವೇ ಮಿಗಿಲೆಂದುಕೊಳ್ಳುತ್ತಾರೆ" ಎಂದು ಹೇಳಿ "ಏನು ವಿಮಲಾದೇವಿ, ನೀವು ಹೇಳಿರಿ ನಾನು ಹೇಳಿದುದೆಲ್ಲಾ ನಿಜವೋ ಸುಳ್ಳೊ?" ಎಂದನು.

ವಿಮಲೆಯು "ಮಹಾಶಯ! ಅದನ್ನೆಲ್ಲಾ ಹೇಳುವಷ್ಟು ಪ್ರೌಢೆಯು ನಾನಲ್ಲ. ನಿಜವಾಗಿಯೂ ನಾನಂತೂ ಹೆಮ್ಮೆ ಪಟ್ಟುಕೊಳ್ಳುವುದಿಲ್ಲ" ಎಂದಳು.

ಭಟ್ಟನು ಎಡಗೈಯಿಂದ ವಿಮಲೆಯ ಬೆನ್ನು ತಟ್ಟಿ "ಸರಿಯಾದ ಏಟು ಕೊಟ್ಟೆ, ವಿಮಲೆ. ಕವಿರಾಜನು ಸೋಲನ್ನೊಪ್ಪಿಕೊಳ್ಳಲೇ ಬೇಕು" ಎಂದನು.

ವಿಮಲೆಯು ನಗುತ್ತಾ, "ಮಾಸ್ಟರ್. ನಾನೊಂದು ಮಾತು ಹೇಳುತ್ತೇನೆ. ನೀವಿಬ್ಬರೂ ಬಹಳ ಸ್ನೇಹಿತರು. ನಿಮ್ಮಿಬ್ಬರ ವಾಗ್ಬಾಣಗಳ

ಮಧ್ಯದಲ್ಲಿ ನನ್ನನ್ನು ಸಿಲುಕಿಸಬೇಡಿರಿ. ನಾನು ಅಬಲೆ. ನೀವಿಬ್ಬರೂ ಪರಸ್ಪರ ವಿರುದ್ಧವಾದವನ್ನು ತಂದುಕೊಂಡು ನಿಜವೋ ಸುಳ್ಳೋ— ನಿಜವೋ ಸುಳ್ಳೋ? ಎಂದು ನನ್ನನ್ನು ಕೇಳುತ್ತಿದ್ದರೆ ನಾನೇನು ಹೇಳುವುದು? ಇತ್ತದರಿ-ಅತ್ತಪುಲಿ ಎಂದಂತಾಗುತ್ತದೆ, ನನ್ನ ಅವಸ್ಥೆ. ನಿಮ್ಮ ನಿಮ್ಮ ಮಾತಿನಲ್ಲಿ ನೀವಿಬ್ಬರೂ ನಿಜ. ನೀವಿಬ್ಬರೂ ಸುಳ್ಳು" ಎಂದಳು.

ಅವರಿಬ್ಬರೂ ಗಹಗಹಿಸಿ ನಕ್ಕರು.

ಭಟ್ಟನು ವಿಮಲೆಯ ಭುಜದ ಮೇಲೆ ಕೈ ಹಾಕಿ ಕುಲುಕುತ್ತಾ "ನಿಜ! ನಿಜ! ನಮ್ಮಿಬ್ಬರ ಮಾತಿಗಿಂತಲೂ ನಿನ್ನ ಮಾತೇ ನಿಜ" ಎಂದು ಹೇಳಿದನು.

ವಿಮಲೆಯು ನಾಚಿಕೆಯಿಂದ ತಲೆಬಾಗಿ ಕುಳಿತಳು. ಲಕ್ಷ್ಮೀ ನಿವಾಸವು ಬಂದಿತು. ಮೂವರೂ ಕೋಣೆಗೆ ಹೋಗಿ ಕುಳಿತರು. ಭಟ್ಟನು ಭೋಜನವನ್ನು ತರುವಂತೆ ಪರಿಚಾರಕನಿಗೆ ಹೇಳಿದನು. ಭೋಜನವು ಬಂದಿತು. ಮೂವರೂ ಮಾತನಾಡುತ್ತ ಊಟವನ್ನು ಮುಗಿಸಿದರು. ಭಟ್ಟನು "ವಿಮಲಾದೇವಿ. ರಾತ್ರಿ ಬಹಳ ಹೊತ್ತಾಗಿದೆ. ನೀನು ಇಲ್ಲಿಯೇ ಮಲಗಿಕೊಳ್ಳಬಾರದೇ ?" ಎಂದನು.

ವಿಮಲೆಯು "ಇಲ್ಲ, ನಾನು ಮನೆಗೆ ಹೋಗಬೇಕು. ಬೆಳಗಿನ ಝಾವದಲ್ಲೆದ್ದು ಅಂಗಸಾಧನೆ ಮಾಡಬೇಕು ಅದಕ್ಕೆಲ್ಲಾ ತೊಂದರೆ ಯಾಗುತ್ತದೆ. ನಾನು ನಮ್ಮ ಮನೆಗೆ ಹೋಗುತ್ತೇನೆ. ನೀವು ಪೂರ್ತಾ ಒಂದು ದಿನ ನಮ್ಮ ಮನೆಯಲ್ಲಿರುತ್ತೇವೆಂದು ಮಾತು ಕೊಟ್ಟಿದ್ದೀರಿ. ಜ್ಞಾಪಕವಿದೆಯೆ ? " ಎಂದು ಕೇಳಿದಳು.

ಭಟ್ಟನು "ಜ್ಞಾಪಕವಿದೆ" ಎಂದು ನಗುತ್ತಾ ಹೇಳಿದನು.

ವಿಜಯನನ್ನು ಕುರಿತು, "ವಿಜಯಾ. ನಿನಗೊಂದು ಕೆಲಸ ಹಚ್ಚ ಬೇಕಾಗಿದೆ. ಈ ವಿಮಲಾ ದೇವಿಯನ್ನು ಈ ರಾತ್ರಿಯಲ್ಲಿ ಒಬ್ಬಳನ್ನೇ ಕಳಿಸುವುದು ಸರಿಯಲ್ಲ. ನೀನು ಹೋಗಿ ಇವಳನ್ನು ಮನೆಯಲ್ಲಿ ಬಿಟ್ಟು ಬರುವೆಯಾ ? " ಎಂದನು.

ವಿಜಯನು ಒಪ್ಪಿಗೆಯನ್ನು ಸೂಚಿಸಿದನು.

ಇಬ್ಬರೂ ಕೆಳಗಿಳಿದು ಮೋಟಾರಿನಲ್ಲಿ ಕುಳಿತು ಹೊರಟರು.

ಹೋಗುತ್ತ ಕವಿಯು ವಿಮಲಾ ದೇವಿಯನ್ನು ಕುರಿತು, "ವಿಮಲೆ ನಿನ್ನ ವಿಷಯವೇ? ಗೊತ್ತಾಗುವಂತಿಲ್ಲ. ನಿನ್ನ ಜೀವನದ ಧ್ಯೇಯವೇನು? ನಟಿಯೋ? ಅಥವಾ ಗೃಹಧರ್ಮಿಣಿಯೋ?" ಎಂದು ಕೇಳಿದನು.

ವಿಮಲೆಗೆ ಆ ಪ್ರಶ್ನೆಯು ಬಹಳ ಕಠಿಣವಾಗಿದ್ದಿತು. ಉತ್ತರ ಕೊಡುವುದಂತೂ ಇನ್ನೂ ಕಷ್ಟವಾಯಿತು.

ಅವಳು ಮೆಲ್ಲ ದನಿಯಿಂದ "ಅದೇ ನನ್ನ ಮನಸ್ಸಿನ ಸಮಸ್ಯೆ. ಒಂದು ಚಿತ್ರಪಠದಲ್ಲಿ ಅಭಿನಯಿಸಿ ಬಿಡಬೇಕೆಂದು ತೀವ್ರೇಚ್ಛೆ ಇತ್ತು. ಅದು ನಿಮ್ಮಿಬ್ಬರ ಅನುಗ್ರಹದಿಂದ ಸಿದ್ಧಿಸಿದೆ. ಆಮೇಲೆ ಗೃಹಧರ್ಮ" ಎಂದಳು.

ಕವಿರಾಜನು "ಅದೂ ಸರಿಯಾಗಿದೆ. ಈ ಚಿತ್ರಪಠದಲ್ಲಿ ಯಶಸ್ಸು ಬಂದರೆ?" ಎಂದನು.

ವಿಮಲೆಯು ಸ್ವಲ್ಪ ಹೊತ್ತು ಮೌನವಾಗಿದ್ದಳು. "ಗೃಹಧರ್ಮವೇ ನನ್ನ ಉಚ್ಚಧ್ಯೇಯ. ಹಿಂದೊಮ್ಮೆ ಬೃಂದಾವನಕ್ಕೆ ಬಂದಿದ್ದೆನಲ್ಲಾ ಆ ಸಂಸಾರದ ಆದರ್ಶವೇ ನನ್ನ ಮನದಲ್ಲಿ ಮಿಡಿಯುತ್ತಿದೆ" ಎಂದಳು.

ವಿಜಯನು ನಕ್ಕು "ಬೃಂದಾವನ! ಕಲ್ಯಾಣಿಯವರನ್ನು ನೋಡಿದ್ದೆಯಷ್ಟೆ. ಅವರು ಈ ಚಿತ್ರಪಠದ ವೃತ್ತಿ, ನಟಿಯ ವೃತ್ತಿಯನ್ನು ಮನಸ್ಸಿನಲ್ಲಿಯೂ ಸ್ಮರಿಸುವುದಿಲ್ಲ" ಎಂದು ಹೇಳಿದನು.

ಅಷ್ಟರಲ್ಲಿ ವಿಮಲೆಯ ಮನೆಯ ಮುಂದೆ ಕಾರು ನಿಂತಿತು. ಅವಳು ಕವಿರಾಜನಿಗೆ ವಂದಿಸಿ ಮಹಡಿಯ ಮೆಟ್ಟಲುಗಳನ್ನು ಹತ್ತಿ ಹೊರಟು ಹೋದಳು. ಬಾಗಿಲಿನಲ್ಲಿಯೇ ಕಾದು ಕುಳಿತಿದ್ದ ವೃದ್ಧ ಚಿಕ್ಕಪ್ಪನು ಅವಳನ್ನು ಕರೆದುಕೊಂಡು ಹೋದನು. ವಿಜಯನು ಲಕ್ಷ್ಮೀನಿವಾಸಕ್ಕೆ ಹಿಂದಿರುಗಿದನು.

ಮಾರನೇ ದಿನ ಬೆಳಗ್ಗೆ ಭಟ್ಟನೂ ವಿಜಯನೂ ಎದ್ದು ಚಹ ಕುಡಿಯುತ್ತಿದ್ದಾಗಲೇ ವಿಮಲಾದೇವಿಯು ಬಂದು ದರ್ಶನವಿತ್ತಳು.

ಭಟ್ಟನು "ಏನು ವಿಮಲಾದೇವಿ? ಇಂದು ನಮ್ಮನ್ನು ಸೆರೆ ಹಿಡಿದುಕೊಂಡು ಹೋಗಲು ಬಂದಿದ್ದೀಯೋ? ಎಂದು ಹಾಸ್ಯ ಮಾಡಿದನು.

ವಿಮಲೆಯು "ಸೆರೆ ಹಿಡಿಯುವುದೆಂದರೇನು? ಒಂದು ದಿನ ನಮ್ಮ

ಮನೆಯಲ್ಲಿ ನೀವು ಆತಿಥ್ಯವನ್ನು ಸ್ವೀಕರಿಸಿದರೆ, ನನಗೆಷ್ಟೋ ಹೆಮ್ಮೆ. ಶಬರಿಯ ಆಶ್ರಮಕ್ಕೆ ರಾಮಲಕ್ಷ್ಮಣರು ಬಂದಂತಾಗುತ್ತದೆ" ಎಂದು ಹೇಳಿದಳು,

ವಿಜಯನು "ವಿಮಲಾದೇವಿ. ಈ ಪುರಾಣದ ಕಥೆಯು ನಿಮ್ಮ ಸ್ಕೂಲ್ ಪುಸ್ತಕಗಳಲ್ಲಿದೆಯೇನು? ಇದನ್ನೆಲ್ಲಿ?" ಕಲಿತೆ ಎಂದು ಕೇಳಿದನು.

ವಿಮಲೆಯು "ನಾನು ಮರಾಠಿ ಭಾಷೆಯಲ್ಲಿ ರಾಮಾಯಣ ಮಹಾಭಾರತಗಳನ್ನು ಎಷ್ಟೋ ಬಾರಿ ಒದಿದ್ದೇನೆ. ನಾಟಕಗಳು ನಾವೆಲ್ಲುಗಳಿಗಿಂತಲೂ ನನಗೆ ರಾಮಾಯಣ ಭಾರತಗಳು ಪ್ರಿಯವಾಗಿವೆ" ಎಂದಳು.

ವಿಜಯನು "ಅದಕ್ಕಾಗಿಯೇ ನೀನು ಪಾರ್ವತಿಯ ಪಾತ್ರಕ್ಕೆ ತಕ್ಕವಳೆಂದು ನಾನು ಹೇಳುವುದು. ಆ ಪುರಾಣದ ಭಾವನೆಯ ಪಾತ್ರಗಳು ತಲೆಯಲ್ಲಿ ತುಂಬಿರಬೇಕು" ಎಂದನು.

ವಿಮಲೆಯು "ಸರಿ. ಇನ್ನು ನಮ್ಮ ಮನೆಗೆ ಹೊರಡೋಣ. ದಯವಿಟ್ಟು ಹೊರಡಿರಿ" ಎಂದು ಹೇಳಿದಳು.

ಇಬ್ಬರೂ ಬೇಗ ಬೇಗ ಸ್ನಾನವನ್ನು ಪೂರೈಸಿ, ಬಟ್ಟೆಗಳನ್ನು ಹಾಕಿಕೊಂಡು ಹೊರಟರು. ಕೆಳಗಡೆ ಗಾಡಿಯು ಸಿದ್ಧವಾಗಿದ್ದಿತು. ಮೂವರೂ ವಿಮಲೆಯ ಮನೆಗೆ ಹೋದರು. ವಿಮಲೆಯು ಅತ್ಯುತ್ಸಾಹದಿಂದ ಅವರಿಬ್ಬರನ್ನೂ ಕರೆದುಕೊಂಡು ಹೋಗಿ, ಮಹಡಿಯ ಹಜಾರದಲ್ಲಿ ಹಾಸಿದ್ದ ರತ್ನಗಂಬಳಿಯ ಮೇಲೆ ಕೂಡಿಸಿದಳು. ಒಳಗೆ ಹೋಗಿ, ಇಬ್ಬರ ಮುಂದೆಯೂ ಚಹ ಬಟ್ಟಲುಗಳನ್ನು ತಂದಿಟ್ಟಳು.

"ಮಾಸ್ಟರ್. ಈಗ ನೀವು ಎಲ್ಲಿಯೂ ಹೊರಗಡೆ ಹೋಗುವುದಿಲ್ಲ. ಮೋಟಾರು ಏಕೆ ವೃಥಾ ಕಾದಿರಬೇಕು? ಮಧ್ಯಾಹ್ನ ಮೂರು ಘಂಟೆಗೆ ಬರುವಂತೆ ಹೇಳಿ ಕಳುಹಿಸಿಬಿಡಲೇ" ಎಂದು ಕೇಳಿದಳು.

ಭಟ್ಟನು ನಗುತ್ತಾ "ಓಹೋ, ಆಗಬಹುದು. ತಮ್ಮ ಅಧೀನದಲ್ಲಿದ್ದೇವೆ. ತಾವು ಅಪ್ಪಣೆ ಮಾಡಿದಂತೆ ಆಗಬಹುದು" ಎಂದನು.

ವಿಮಲೆಯು "ಏನಾದರೂ ಹಾಸ್ಯ ಮಾಡಿ. ಕಾರು ವೃಥಾ ಕಾಯುವುದಂತೂ ಬೇಡ" ಎಂದು ಹೇಳಿ ಕೆಳಗಿಳಿದು ಹೋಗಿ ಡ್ರೈವರನ್ನು ಕರೆದು

"ಕಾರು ತೆಗೆದುಕೊಂಡು ಹೋಗಿ. ಮಧ್ಯಾಹ್ನ ಮೂರು ಘಂಟೆಗೆ ಬಂದರೆ ಸಾಕು" ಎಂದು ಹೇಳಿ ಮೇಲಕ್ಕೆ ಬಂದಳು.

ಚಹ ಬಟ್ಟಲುಗಳನ್ನು ಚಾಚಾ ತೆಗೆದಿದ್ದರು. ವಿಮಲೆಯು ಅಡಿಗೆಯ ಮನೆಗೆ ಹೋಗಿ, ಅಡಿಗೆಯ ಏರ್ಪಾಡುಗಳಲ್ಲಿದ್ದಳು.

ಭಟ್ಟನು ವಿಮಲಾದೇವಿಯನ್ನು ಕರೆದು "ಇದೇನು ವಿಮಲಾದೇವಿ! ನಮ್ಮನ್ನು ಕರೆತಂದು ಇಲ್ಲಿ ಕಟ್ಟಿಹಾಕಿ ನೀವು ಅಡಿಗೆಯ ಮನೆಯನ್ನು ಹೊಕ್ಕಿಬಿಟ್ಟಿರಿ. ಇದೇನು?" ಎಂದು ಕೇಳಿದನು.

ವಿಮಲೆಯು ಬಂದು ವಿನಯದಿಂದ ನಿಂತುಕೊಂಡು "ನಾನೇ ಅಡಿಗೆ ಮಾಡಬೇಕು. ನಾನು ನನ್ನ ಕೈಯಿಂದಲೇ ಅಡಿಗೆ ಮಾಡಿ ಬಡಿಸಿದರೆ, ನನಗೆ ಬಹಳ ಸಂತೋಷವಾಗುತ್ತದೆ. ಸಹಾಯಕ್ಕೆ ಒಬ್ಬಾಕೆಯನ್ನು ಕರೆದಿದ್ದೇನೆ. ಆಕೆಯೂ ಬಂದಿದ್ದಾಳೆ. ಒಂದು ಗಂಟೆಯೊಳಗೆ, ಅಡಿಗೆಯು ಪೂರೈಸುತ್ತದೆ. ಆಮೇಲೆ, ನಿಮ್ಮ ಜೊತೆಯಲ್ಲಿಯೇ ಇರುತ್ತೇನೆ" ಎಂದು ಹೇಳಿದಳು.

ಭಟ್ಟನು ಸುಮ್ಮನಾದನು. ವಿಜಯನೂ ಭಟ್ಟನೂ ಮಾತಿಗೆ ಮೊದಲು ಮಾಡಿದರು. ಭಟ್ಟನು "ಈ ವಿಮಲೆಯು ವಿಚಿತ್ರ ಹೆಣ್ಣು, ತಾನೇ ಅಡಿಗೆ ಮಾಡುತ್ತಾಳಂತೆ. ಇದೆಲ್ಲಾ ಏನು ವಿಚಿತ್ರ? ನಟಿಯಾಗುವವಳು ಬೆಂಕಿಯ ಸೆಕೆಯಲ್ಲಿ ಕುಳಿತು ಅಡಿಗೆ ಮಾಡುವುದೆ?" ಎಂದನು.

ವಿಜಯನು "ಅದೆಲ್ಲಾ ನಮಗೇಕೆ? ಅವಳೇನು ಮಾಡಿಕೊಂಡರೆ ನಮಗೇನು? ನಮ್ಮ ಕೆಲಸ ಸರಿಯಾಗಿ ಮಾಡಿದರಾಯಿತು" ಎಂದು ಹೇಳಿದನು.

ಭಟ್ಟನು "ನೋಡು ವಿಜಯಾ. ಮೂರು ತಿಂಗಳ ಮೇಲಾದರೂ ನಮ್ಮ ಚಿತ್ರದ ಕಾರ್ಯವನ್ನು ತ್ವರಿತವಾಗಿ ಆರಂಭಿಸಬೇಕು. ಅದಕ್ಕೇನು ಏರ್ಪಾಟು ಮಾಡುವೆಯೋ, ದೇವರೇ ಬಲ್ಲ. ಶಾಂತಾರಾಂರವರು ಕುಮಾರ ಸಂಭವದ ಕಥೆಯು ಸರಿಬೀಳುವುದಿಲ್ಲವೆಂದು ಹೇಳುತ್ತಾರೆ" ಎಂದನು.

ವಿಜಯನು "ಅವರಿಗೇನು ಗೊತ್ತು? ಅದೃಷ್ಟದಿಂದ ಹೆಸರು ಮಾಡಿದ್ದಾರೆ. ಕುಮಾರ ಸಂಭವದ ಕಥೆಯೂ ಅಲ್ಲ. ಯಾವ ಕಥೆಯೂ ಅಲ್ಲ.

ಅದು ನಾನೇ ವಿರಚಿಸಿರುವ ಕಥೆ. ಹಿಮವಂತನ ಪುತ್ರಿಯು ಕೈಲಾಸವಾಸಿ ಯನ್ನು ವರಿಸುವ ತಪಸ್ಸು ಮಾಡಿದ ಕಥೆ. ಈಶ್ವರನ ತಪಸ್ಸು-ಪಾರ್ವತಿಯ ಪರಿಚರ್ಯೆ. ಈಶ್ವರನ ತಪೋಭಂಗ-ಪುನಃ ಪಾರ್ವತಿಯ ತಪಸ್ಸು- ಈಶ್ವರನ ವರಪ್ರದಾನ. ಇಷ್ಟೇ ನಮ್ಮ ಕಥಾ ವಸ್ತು. ಈ ಕಥೆಯನ್ನು ಚಿತ್ರಪಠಕ್ಕೆ ಹೊಂದಿಸುವುದಕ್ಕೆ ಆಗುವುದಿಲ್ಲವೆಂದು ಹೇಳಿದರೆ, ಇಷ್ಟು ದಿನ ನಾನು ಮಾಡಿದ ತಪಸ್ಸೆಲ್ಲಾ ವ್ಯರ್ಥವೇ ಸರಿ. ನನ್ನ ತಪಸ್ಸಿಗೆ ಪರಶಿವನೇ ಪ್ರತ್ಯಕ್ಷವಾಗಬೇಕು. ಪರಶಿವನ ಚಿತ್ರವಾದರೂ ಆಗದಿದ್ದರೆ, ಅದೇನು ಫಲ ?" ಎಂದನು.

"ಈ ತಪಸ್ಸುಗಳ ಮಧ್ಯೆ ಗಾನ ನರ್ತನಗಳನ್ನೆಲ್ಲಿ ಕೂಡಿಸುವೆ ?

"ಪಾರ್ವತಿಯ ಗೆಳತಿಯರ ತಂಡವೇ ಇರುತ್ತದೆ ಅವರ ಗಾನ ನರ್ತನ ಗಳನ್ನು ತರುತ್ತೇನೆ. ಅಪ್ಸರ ಸ್ತ್ರೀಯರು ಪರಶಿವನ ತಪೋ ಭಂಗಕ್ಕಾಗಿ ಗಾನ ನರ್ತನಗಳನ್ನು ಮಾಡುವಂತೆ ಚಿತ್ರದಲ್ಲಿ ತರುತ್ತೇನೆ. ಮಾಘ ಕವಿಯು ವರ್ಣಿಸಿರುವಂತೆ ಆರು ಋತುಗಳನ್ನು ಒಂದೇ ಕಾಲದಲ್ಲಿ ನಿರ್ಮಿಸಿ ತೋರಿಸುತ್ತೇನೆ. ಕೈಲಾಸವೆಂದರೆ, ಸಾಕ್ಷಾತ್ ಕೈಲಾಸವೇ ಇದ್ದಂತೆ ಮಾಡಬೇಕು. ಹಿಮವಂತನ ಅರಮನೆಯೆಂದರೆ, ಹಿಮದ ಬೆಟ್ಟದಲ್ಲಿಯೇ ಕೊರೆದು ಮಾಡಿದ ಅರಮನೆಯಾಗಿರಬೇಕು"

ಹೀಗೆ ವಿಜಯನು ಚಿತ್ರಪಠದ ಕಲ್ಪನಾ ಚಿತ್ರಗಳನ್ನು ವರ್ಣಿಸಲಾ ರಂಭಿಸಿದನು. ಎಷ್ಟು ಹೊತ್ತಾಯಿತೋ ಇಬ್ಬರಿಗೂ ತಿಳಿಯಲೇ ಇಲ್ಲ. ವಿಮಲೆಯೂ ಬಂದು ಆ ಚಿತ್ರದ ವರ್ಣನೆಯನ್ನು ಕೇಳುತ್ತ ಕುಳಿತಳು.

ಭಟ್ಟನು "ವಿಮಲಾದೇವೀ, ಇದೇನು ಭೋಜನವುಂಟೋ ಇಲ್ಲವೋ ? ನೀನೂ ಬಂದು ಕಥೆ ಕೇಳುತ್ತಾ ಕುಳಿತುಬಿಟ್ಟೆ" ಎಂದು ಕೇಳಿದನು.

ವಿಮಲಾದೇವಿಯು "ಒಳಗೆ ಭೋಜನಕ್ಕೆ ಸಿದ್ಧಪಡಿಸಿದ್ದೇನೆ. ನಿಮ್ಮ ಮಾತಿನ ಮಧ್ಯೆ ಅಡ್ಡಿ ಪಡಿಸಬಾರದೆಂದು ನಾನೂ ಕಥೆಯನ್ನು ಕೇಳುತ್ತಾ ಕುಳಿತೆ. ಏಳಿರಿ ? ಭೋಜನಕ್ಕೆ ಸಿದ್ಧವಾಗಿದೆ" ಎಂದು ಹೇಳಿ ಇಬ್ಬರನ್ನು ಭೋಜನಕ್ಕೆಬ್ಬಿಸಿದಳು.

ಒಳಗೆ ಭೋಜನದ ಕೋಣೆಯಲ್ಲಿ ಎರಡು ಮಣೆಗಳನ್ನು ಹಾಕಿದ್ದವು. ಎದುರಿಗೆ ಮಣೆಯ ಮುಂದೆ, ಮತ್ತೊಂದು ಮಣೆಯನ್ನಿಟ್ಟು, ಅದರ

ಮೇಲೆ ತಟ್ಟೆ ಬಟ್ಟಲುಗಳು ಇಡಲ್ಪಟ್ಟಿದ್ದವು. ಸಾರು, ಅಮಟೆ, ಪಲ್ಯ, ಗೊಜ್ಜು, ಕೋಸಂಬರೀ, ಉಪ್ಪಿನಕಾಯಿ, ಚಟ್ನಿಗಳು ಆ ಬಟ್ಟಲುಗಳಲ್ಲಿ ಇಡಲ್ಪಟ್ಟಿದ್ದವು. ಒಂದು ಬಟ್ಟಲಿನಲ್ಲಿ ತುಪ್ಪ, ಮತ್ತೊಂದರಲ್ಲಿ ಕೆನೆ ಮೊಸರು. ತಟ್ಟೆಯಲ್ಲಿ ಕೊಂಚವಾಗಿ ಅನ್ನ ಬಡಿಸಿತ್ತು. ವಿಮಲಾ ದೇವಿಯು ಆ ಮಣೆಗಳ ಮೇಲೆ ಭಟ್ಟನನ್ನು, ವಿಜಯನನ್ನು ಕೂಡಿಸಿದಳು.

ವಿಜಯನು "ವಿಮಲಾದೇವೀ, ನಿಮಗೆ ಭೋಜನಕ್ಕಿಟ್ಟಿಲ್ಲವಲ್ಲ" ಎಂದು ಕೇಳಿದನು.

ವಿಮಲೆಯು "ಇಲ್ಲಾ, ನಾನೇ ಬಡಿಸುತ್ತೇನೆ" ಎಂದಳು.

ಭಟ್ಟನು "ಇನ್ನು ಬಡಿಸುವುದೇನಾದರೂ ಇದೆಯೇನು ?" ಎಂದು ಕೇಳಿದನು.

ವಿಮಲೆಯು ನಗುತ್ತಾ "ಇದೆ. ಕೊಂಚವಿದೆ. ಹೆಚ್ಚಾಗಿ ಏನೂ ಇಲ್ಲ. ಊಟಕ್ಕೆ ಆರಂಭಿಸಿರಿ" ಎಂದು ಹೇಳಿದಳು.

ಇಬ್ಬರು ಗೆಳೆಯರೂ ಕೊಂಚ ಕೊಂಚ ಅನ್ನವನ್ನು ತಿಂದರು. ವಿಮಲೆಯು ಪೂರಿಗಳನ್ನು ತಂದು ಬಡಿಸಿ, ಶ್ರೀಕಂಡ್ ಬಡಿಸಿದಳು. "ಇದು ಮಹಾರಾಷ್ಟ್ರದ ಸ್ಪೆಷಲ್" ಎಂದು ಹೇಳಿದಳು. ಕೊಂಚ ಕೊಂಚ ಮಿಠಾಯಿಗಳನ್ನು ತಂದು ಬಡಿಸಿದಳು. ಎರಡು ಬಟ್ಟಲುಗಳಲ್ಲಿ ಹಾಲು ಖೀರನ್ನು ತಂದಿಟ್ಟಳು. ಭಟ್ಟನೂ ವಿಜಯನೂ ಆ ಅಡಿಗೆಯನ್ನು ಹೊಗಳುತ್ತಾ ಊಟ ಮಾಡಿದರು. ವಿಮಲಾದೇವಿಯು ಎದುರಿಗೇ ನಿಂತಿದ್ದಳು.

ಭಟ್ಟನು "ಸೊಗಸಾದ ಊಟ, ವಿಮಲಾದೇವೀ" ಎಂದು ಹೇಳಿದನು. ಇಬ್ಬರು ಗೆಳೆಯರೂ ಕೈ ತೊಳೆದುಕೊಂಡು ಬಂದು ಹಜಾರದಲ್ಲಿ ಕುಳಿತು ಕೊಂಡರು.

ವಿಮಲೆಯು ತಾಂಬೂಲದ ತಟ್ಟೆಯನ್ನು ತಂದು ಮುಂದಿಟ್ಟಳು. ಸಿಗರೇಟಿನ ಡಬ್ಬ, ಮ್ಯಾಚ್ ಬಾಕ್ಸ್‌ಗಳನ್ನು ತಂದಿಟ್ಟು ಒಂದು "ಆಶ್ ಟ್ರೆ" ಯನ್ನು ತಂದಿಟ್ಟಳು.

ವಿಜಯನು "ಇದೆಲ್ಲಿ ಸಂಪಾದಿಸಿದೆ ?" ಎಂದು ಕೇಳಿದನು.

"ನಿನ್ನೆಯ ದಿನ ಸಿಗರೇಟು ಕೊಂಡುಕೊಳ್ಳುವುದಕ್ಕೆ ಹೋದಾಗ ಅದನ್ನು ಮಾರ್ಕೆಟ್ಟಿನಲ್ಲಿ ತಂದೆ" ಎಂದು ಹೇಳಿದಳು.

ಭಟ್ಟನೂ ವಿಜಯನೂ ತಾಂಬೂಲ ಚರ್ವಣಕ್ಕೆ ಆರಂಭ ಮಾಡಿದರು.

ವಿಮಲೆಯು ಒಳಗೆ ಹೋಗಿ ಐದು ಹತ್ತು ನಿಮಿಷಗಳಲ್ಲಿ ಊಟವನ್ನು ಪೂರೈಸಿಕೊಂಡು ಬಂದು ಕುಳಿತಳು. ಸ್ವಲ್ಪ ಹೊತ್ತು ಮಾತನಾಡುತ್ತಿದ್ದಂತೆಯೇ ಅವರಿಬ್ಬರಿಗೂ ತೂಕಡಿಗೆ ಹತ್ತಿತು. ವಿಮಲೆಯು ಕೋಣೆಯೊಳಗೆ ಹೋಗಿ ತಲೆದಿಂಬುಗಳನ್ನು ತಂದುಕೊಟ್ಟಳು. ಅವರಿಬ್ಬರೂ ಸ್ವಲ್ಪ ವಿಶ್ರಮಿಸಿಕೊಂಡರು.

ಅಷ್ಟರಲ್ಲಿ ವಿಮಲೆಯು ತನ್ನ ಕೋಣೆಗೆ ಹೋಗಿ ತಲೆಯನ್ನು ಬಾಚಿ ಹೆರಳು ಕಟ್ಟಿಕೊಂಡಳು. ಹೂವಿನ ದಂಡೆಯನ್ನು ಆ ಹೆರಳಿನ ಮೇಲಿಟ್ಟು ಕಟ್ಟಿದಳು. ಎಳೆಗೆಂಪು ಬಣ್ಣದ ಜಾರ್ಜೆಟ್ ಸೀರೆಯನ್ನುಟ್ಟು, ಬ್ಲೌಸ್ ತೊಟ್ಟುಕೊಂಡಳು. ಕಿವಿಗೆ ಮುತ್ತಿನ ಲೋಲಾಕೊಂದನ್ನು ಧರಿಸಿದಳು. ಕೈಗೆ ಚಿನ್ನದ ಬಳೆಗಳನ್ನು ತೊಟ್ಟುಕೊಂಡಳು. ಬೆರಳಿನಲ್ಲಿ ಒಂದೇ ಒಂದು ವಜ್ರದುಂಗುರವಿತ್ತು.

ಅರ್ಧಗಂಟೆಯೊಳಗಾಗಿ ಭಟ್ಟನು ಎದ್ದು ಕುಳಿತು ಸಿಗರೇಟು ಹಚ್ಚಿ " ವಿಜಯಾ ! ನಿದ್ದೆ ಮಾಡುವೆಯೇನು ?" ಎಂದು ಕೇಳಿದನು.

ವಿಜಯನು " ನಾನೆಲ್ಲಿ ಮಲಗಿದ್ದೇನೆ? ಎದ್ದೇ ಇದ್ದೇನೆ ಎಂದು ಹೇಳುತ್ತಾ ಕುಳಿತುಕೊಂಡನು.

ಭಟ್ಟನು " ವಿಮಲಾದೇವಿ " ಎಂದು ಕರೆದನು.

ವಿಮಲೆಯು ಕೋಣೆಯೊಳಗಿನಿಂದ ಬಂದು ನಿಂತಳು.

ಭಟ್ಟನು ಓಹೋ ! ಅಲಂಕಾರವೆಲ್ಲಾ ಪೂರೈಸಿದೆ. ಎಲ್ಲಿಗೆ ಹೊರಟಿದ್ದೀಯೇ " ಎಂದು ಕೇಳಿದನು.

ವಿಮಲೆಯು " ಎಲ್ಲಿಗೆ ಹೊರಡಬೇಕು ? ನಿಮಗೆ ಚಹಾ ಕೊಟ್ಟು ಅಪ್ಪಣೆ ಕೊಟ್ಟರೆ ಸ್ವಲ್ಪ ಸಂಗೀತವನ್ನು ಹಾಡೋಣವೆಂದಿದ್ದೇನೆ" ಎಂದು ಹೇಳಿದಳು.

ಭಟ್ಟನು ತಲೆದೂಗಿದನು.

ವಿಮಲೆಯು ಎರಡು ಕಪ್ಪುಗಳಲ್ಲಿ ಚಹಾ ತಂದಿಟ್ಟಳು.

ಭಟ್ಟನು "ಇದೇನು, ವಿಮಲಾದೇವಿ. ಈಗಲೂ ನೀನು ನಮ್ಮೊಡನೆ ಚಹಾ ತೆಗೆದುಕೊಳ್ಳುವುದಿಲ್ಲವೇನು ? " ಎಂದನು.

ವಿಮಲೆಯು "ಅದೇನೂ ಇಲ್ಲ. ಚಹಾ ಕುಡಿದರೆ ಹಾಡುವುದಕ್ಕೆ ಆಗುವುದಿಲ್ಲ" ಎಂದು ಹೇಳಿ ಒಳಗೆ ಹೋಗಿ ಒಂದು ಕಪ್ಪಿನಲ್ಲಿ ಸ್ವಲ್ಪ ಚಹಾ ತಂದು ಕೊಂಚ ಕೊಂಚವಾಗಿ ಆಸ್ವಾದನ ಮಾಡಲಾರಂಭಿಸಿದಳು.

ಚಹಾ ಪೂರೈಸಿತು. ಭಟ್ಟನು ವರಗುದಿಂಬನ್ನು ಒರಗಿದನು.

ವಿಮಲೆಯು "ಚಾಚಾ" ಎಂದು ಕರೆದಳು.

ವೃದ್ಧ ಸೇವಕನು ಬಂದು ತಲೆದಿಂಬುಗಳನ್ನು ತೆಗೆದುಕೊಂಡು ಹೋಗಿ ಒಳಗಿಟ್ಟನು.

ಭಟ್ಟನು "ವಿಮಲಾ ದೇವಿ. ಈ ಚಾಚಾ ಯಾರು?" ಎಂದು ಕೇಳಿದನು.

ವಿಮಲೆಯು "ಅವನು ನಮ್ಮ ತಂದೆಯ ಪ್ರೀತಿಪಾತ್ರನಾದ ಆಳು. ನನಗೆ ತಂದೆ-ತಾಯಿ ಎಲ್ಲರೂ ಸತ್ತುಹೋದರು ಅವನೊಬ್ಬನನ್ನು ಅವರೆಲ್ಲರ ಸ್ಥಾನದಲ್ಲಿಯೂ ಇಟ್ಟು ಕೊಂಡಿದ್ದೇನೆ. ಅವನೂ ಹಾಗೆಯೇ ಇದ್ದಾನೆ" ಎಂದು ಹೇಳಿದಳು.

ಭಟ್ಟನು "ಸರಿ. ಅಂತಹವರಿರಬೇಕು. ನಿನಗೊಬ್ಬ ಆಪ್ತನಿದ್ದಾನೆ. ಸಂತೋಷ" ಎಂದು ಹೇಳಿದನು.

ವಿಮಲೆಯು "ಸ್ವಲ್ಪ ಸಂಗೀತವನ್ನು ಹಾಡಲೇ?" ಎಂದು ಕೇಳಿದಳು

ಭಟ್ಟನು "ಓಹೋ! ಸಿದ್ಧವಾಗಿದ್ದೇವೆ. ಹಾಡು ಕೇಳೋಣ ಎಂದು ಹೇಳಿದನು.

ವಿಮಲೆಯು ಕೋಣೆಯೊಳಗೆ ಹೋಗಿ ದೊಡ್ಡ ತಂಬೂರಿಯನ್ನು ತೆಗೆದುಕೊಂಡು ಬಂದು ಕುಳಿತಳು.

ಕವಿಯು "ಇದೇನು, ವಿಮಲಾ ದೇವಿ. ಇಷ್ಟು ದೊಡ್ಡ ತಂಬೂರಿ?" ಎಂದನು.

ವಿಮಲೆಯು "ನಮ್ಮ ಸೋದರಮಾವನವರೊಬ್ಬರಿದ್ದರು. ಅವರನ್ನು ಮಹಾರಾಷ್ಟ್ರದಲ್ಲೆಲ್ಲಾ ಸವಾಯ್ ಗಂಧರ್ವ ಎಂದು ಕರೆಯುತ್ತಿದ್ದರು. ಅವರದು ಈ ತಂಬೂರಿ. ಅವರೇ ಈ ಗಂಧರ್ವ ವಿದ್ಯೆಯನ್ನು ಆರಂಭದಲ್ಲಿ ಕಲಿಸಿದವರು" ಎಂದು ಹೇಳಿದಳು.

"ಓಹೋ! ಅವರದೋ ಈ ವಾದ್ಯ. ಸಂಗೀತ ನಿಮಗೆ ಮೊದಲಿನಿಂದಲೂ ಒಲಿದಿದೆ. ಒಳ್ಳೆಯದು. ತಬಲ ಇದೆಯೋ?" ಎಂದು ವಿಜಯನು ಕೇಳಿದನು.

ವಿಮಲೆಯು "ನಮ್ಮ ವಸ್ತಾದರ ತಬಲ ಇದೆ. ಅವರು ತಬಲ ತಂದಿಡದೇ ಪಾಠಕ್ಕೆ ಶುರುಮಾಡುವುದೇ ಇಲ್ಲ" ಎಂದು ಹೇಳಿದಳು.

ವಿಜಯನು "ಅದನ್ನೂ ತೆಗೆದುಕೊಂಡು ಬಾ, ನೋಡೋಣ" ಎಂದು ಹೇಳಿದನು.

ವಿಮಲೆಯು ಹಿಂತಿರುಗಿ ನೋಡಿದಳು. ಚಾಚ ತಬಲ ತಂದಿಟ್ಟನು.

ವಿಜಯನು ಎರಡು ತಬಲಗಳನ್ನೂ ಮುಂದಿಟ್ಟುಕೊಂಡು, ಬೆರಳುಗಳಿಂದ ಒಂದೇಟು ಹೊಡೆದು ನೋಡಿದನು. ಮದ್ದಳೆಯು ಧ್ವನಿಗೈದಿತು.

ವಿಜಯನು "ಇದೇ ಶ್ರುತಿಯು ತಂಬೂರಿಗೂ ಇದೆಯೋ?" ಎಂದು ಕೇಳಿದನು.

"ಹೌದು. ವಸ್ತಾದರೇ ಇಟ್ಟು ಕೊಟ್ಟಿರುವ ಶ್ರುತಿ"ಯೆಂದು ವಿಮಲೆ ತಂಬೂರಿಯನ್ನು ಮೀಟಿದಳು.

ತಂಬೂರಿಯು ಝೇಂಕರಿಸಿತು.

"ವಿಮಲೆ, ಈ ಠಾನದಲ್ಲಿ ಎಷ್ಟು ಹೊತ್ತು ಹಾಡಬಲ್ಲೆ" ಎಂದು ವಿಜಯನು ಕೇಳಿದನು.

ವಿಮಲೆಯು "ಎಷ್ಟು ಹೊತ್ತಾದರೂ ಹಾಡಬೇಕು. ಅದೇ ಸಾಧನೆ ಎಂದು ಹೇಳಿದ್ದಾರೆ, ವಸ್ತಾದರು" ಎಂದು ಹೇಳಿ ತಂಬೂರಿಯನ್ನು ಮೀಟುತ್ತಾ ಗಾನವನ್ನು ಆರಂಭಿಸಿದಳು.

ವಿಜಯನು ತಬಲ ಬಾರಿಸುತ್ತಿದ್ದನು. ಒಂದು ಹಾಡು ಪೂರೈಸುತ್ತಲೇ ವಿಮಲೆಯು ವಿಜಯನ ಕಡೆ ತಿರುಗಿ "ನೀವು ನಮ್ಮವುಸ್ತಾದರಿಗೇನು ಕಡಿಮೆ ಇಲ್ಲ. ಅವರು ನಿಮ್ಮನ್ನು ನೋಡಿದ್ದರೆ ಬಾಚಿ ತಬ್ಬಿಕೊಂಡು ಬಿಡುತ್ತಿದ್ದರು" ಎಂದು ಹೇಳಿದಳು.

ಮತ್ತೊಂದು ಹಾಡು, ಮಗದೊಂದು. ಹೀಗೆ ಮೂರು ನಾಲ್ಕು ಹಾಡು

ಗಳನ್ನು ಹಾಡಿದರು. ಮುಖವು ಬೆವರಿ ಸಣ್ಣ ಸಣ್ಣ ಬೆವರು ಹನಿಗಳು ವಿಮಲೆಯ ಮುಖದ ಮೇಲೆ ಮೂಡಿದವು.

ಭಟ್ಟನು ಕೆಂಪೇರಿದ ಬೆವರು ತುಂತುರುಗಳಿಂದ ಅಲಂಕೃತವಾದ ವಿಮಲೆಯ ಮುಖವನ್ನು ನೋಡುತ್ತಾ ಇವಳೆಷ್ಟು ಸುಂದರಳಾಗಿ ಕಾಣು ತ್ತಾಳೆ—ಎಂದು ಮನಸ್ಸಿನಲ್ಲಿಯೇ ಭಾವಿಸಿಕೊಂಡನು.

ಭಟ್ಟನು "ವಿಮಲಾ ದೇವಿ-ನಿಮಗೆ ಆಯಾಸವಾಗಿದೆ. ಸಾಕು. ಮತ್ತೊಂದು ದಿನ ಸಂಗೀತವನ್ನು ಹಾಡುವಿರಂತೆ" ಎಂದು ಹೇಳಿದನು.

ವಿಜಯನು "ನಿಮ್ಮ ಮಾವನ ಸಂಗೀತ ಮಾರ್ಗವು ಇದೇಯೇನು?" ಎಂದು ಕೇಳಿದನು.

ವಿಮಲೆಯು "ಅಲ್ಲ. ಅವರದು ಹಳೆಯ ಗಂಧರ್ವ ವಿದ್ಯೆ. ಈಗಿನ ಸಿನಿಮಾಕ್ಕೆ ಅದು ಅಷ್ಟು ಸರಿಯಾದ ಮೇಳವಾಗುವುದಿಲ್ಲ. ಇದು ಹಿಂದೂ ಸ್ಥಾನೀ ನವೀನ ಮಾರ್ಗ" ಎಂದು ಹೇಳಿದಳು.

ವಿಜಯನು "ಆ ಹಳೆಯ ಮಾರ್ಗವೂ ಅಭ್ಯಾಸವಿದ್ದರೆ ಒಂದೆರಡು ತುಣಕು ಅನ್ನಿರಿ, ನೋಡೋಣ" ಎಂದು ಕೇಳಿದನು.

ವಿಮಲೆಯು ಕಂಠವನ್ನು ಸರಿಪಡಿಸಿಕೊಂಡು ನಿದಾನವಾಗಿ ಹಾಡ ತೊಡಗಿದಳು.

ಐದು ನಿಮಿಷಗಳ ನಂತರ ವಿಜಯನು "ಚೆನ್ನಾಗಿದೆ. ಇದರ ಜೊತೆಗ ದಕ್ಷಿಣದ ರಾಗ ಜ್ಞಾನವು ಅಭ್ಯಾಸವಾದರೆ ಬಹಳ ಚೆನ್ನಾಗಿ ಶೋಭಿಸುತ್ತದೆ" ಎಂದು ಹೇಳಿದನು.

ವಿಮಲೆಯು ಕೈ ಮುಗಿದು "ದಯಮಾಡಿ ದಕ್ಷಿಣಾದಿಯ ಕೃತಿ ಯೊಂದನ್ನು ಹಾಡಿರಿ. ಕೇಳೋಣ" ಎಂದು ವಿಜಯನನ್ನು ಪ್ರಾರ್ಥಿಸಿದಳು.

ವಿಜಯನು "ನನಗೆ ಹಾಡುವುದಕ್ಕೆ ಬರುತ್ತದೆಂದು ನಿನಗಾರು ಹೇಳಿ ದರು? ನಿನ್ನದು ಸ್ತ್ರೀಕಂಠ ಅದರ ಜೊತೆಗೆ ನನ್ನ ಕಂಠವು ಸರಿಗಟ್ಟ ಬಲ್ಲುದೇ?" ಎಂದನು.

ವಿಮಲೆಯು "ನಿಮ್ಮ ತಬಲಾ ಗತಿಯನ್ನು ನೋಡಿದಾಗಲೇ ನನಗೆ ಗೊತ್ತಾಯಿತು. ನಮ್ಮ ಉಸ್ತಾದರು ಯಾವಾಗಲೂ ರಾಗಾಲಾಪ ಮಾಡಿ ಕೊಳ್ಳುತ್ತಾರೆ. ರಾಗವನ್ನು ಧ್ಯಾನ ಮಾಡುತ್ತಲೇ ಬೀದಿಯಲ್ಲಿ ನಡೆದು

ಹೋಗುತ್ತಾರೆ. ಅವರ ಮೇಲೆ ಮೋಟಾರು ಹರಿದು ಹೋದರೂ ಅವರಿಗೆ ಪರಿವೆಯೇ ಇರುವುದಿಲ್ಲ. ಹಾಗೆಯೇ ನೀವೂ ಹಾಡಬಹುದೆಂದು ಭಾವಿಸಿದೆ. ಕ್ಷಮಿಸಿರಿ '' ಎಂದು ಹೇಳಿದಳು.

ವಿಜಯನು ತಂಬೂರಿಯನ್ನು ಕೈಗೆ ತೆಗೆದುಕೊಂಡು ಶೃತಿ ಮಾಡಿ ವಿಮಲೆಯ ಕೈಗೆ ಕೊಟ್ಟು " ಇಲ್ಲಿ ಕುಳಿಕೋ '' ಎಂದು ಪಕ್ಕದಲ್ಲಿ ಕೈತೋರಿಸಿದನು. ತಬಲಕ್ಕೆ ಕೆಳಗಡೆ ವತ್ತು ಕೊಟ್ಟು ಮುಂದೆ ಇಟ್ಟು ಕೊಂಡನು. ಭೈರವಿಯ ಕೃತಿಯೊಂದನ್ನು ಹಾಡಿದನು. ರಾಗ, ವಿಸ್ತಾರ, ಪಲ್ಲವಿಗಳನ್ನು ಮುಗಿಸುವ ಹೊತ್ತಿಗೆ ಒಂದು ಗಂಟೆಯ ಕಾಲವು ಹಿಡಿಯಿತು. ಆ ಮಹಡಿಯೆಲ್ಲವೂ ಪ್ರತಿಧ್ವನಿಯಿಂದ ಝೇಂಕರಿಸುವಂತೆ ರಾಗಧ್ವನಿಯು ತುಂಬಿಹೋಯಿತು.

ವಿಮಲೆಯು ಶಿಲಾ ಪ್ರತಿಮೆಯಂತೆ ಕುಳಿತುಬಿಟ್ಟಳು.

ಭಟ್ಟನು ಆ ಗಾನದಲ್ಲಿ ಮುಳುಗಿದನು.

ಗಾನವು ಪೂರೈಸುತ್ತಲೇ ಭಟ್ಟನು "ವಿಜಯಾ! ನೀನೇಕೆ ಬೇರೆಯ ನಟನನ್ನು ಹುಡುಕಿದೆ? ನಿನ್ನ ಗಾನ ಅಭಿನಯಗಳು ಈ ಸಿನಿಮ ಪ್ರಪಂಚವನ್ನು ಮೆಟ್ಟಿ ಹಾರುವಂತಿದೆ " ಎಂದು ಹೇಳಿದನು.

ವಿಜಯನು "ಅದಕ್ಕೆ ಕಾರಣವನ್ನು ಈಗಾಗಲೇ ಹೇಳಿದ್ದೇನೆ. ನಿನಗೆ ನೆನಪಿಲ್ಲವೆ ? ಎಂದು ಕೇಳಿದನು.

ವಿಮಲೆಯು ವಿಜಯನಿಗೆ ಕೈ ಮುಗಿದು "ಎಷ್ಟು ವರ್ಷಗಳಾದರೂ ಜೊತೆಗೆ ನಿಲ್ಲುವ ಸಾಮರ್ಥ್ಯವು ಯಾವ ನಟಿಗೂ ಬರಲಾರದು " ಎಂದು ಹೇಳಿ ಕೈ ಮುಗಿದಳು.

ಚಾಚಾ ಬಂದು ತಂಬೂರಿಯನ್ನು ತೆಗೆದುಕೊಂಡು ಹೋಗಿ ಒಳಗಿಟ್ಟನು. ತಬಲವನ್ನೂ ಒಳಕ್ಕೆ ತೆಗೆದುಕೊಂಡು ಹೋದನು.

ವಿಮಲೆಯು ಮೂರು ಗಾಜಿನ ಲೋಟಾಗಳಲ್ಲಿ ಹಣ್ಣಿನ ರಸವನ್ನು ತಂದಿಟ್ಟು ತೆಗೆದುಕೊಳ್ಳುವಂತೆ ಆ ಸ್ನೇಹಿತರಿಬ್ಬರನ್ನೂ ಪ್ರಾರ್ಥಿಸಿದಳು.

ಅವರು ಸ್ವೀಕರಿಸಿದರು.

ಭಟ್ಟನು, "ವಿಮಲೆ, ನೀನೂ ತೆಗೆದುಕೋ. ಬಹಳ ಚೆನ್ನಾಗಿ ತಯಾರು ಮಾಡಿದ್ದೀಯೇ '' ಎಂದು ಹೇಳಿದನು.

ಹಣ್ಣಿನ ರಸವನ್ನು ತೆಗೆದುಕೊಳ್ಳುವಾಗ ಭಟ್ಟನು " ಕಾರು ಬಂದಿರ ಬಹುದಲ್ಲವೆ ? " ಎಂದು ಕೇಳಿದನು.

ವೃದ್ಧ ಸೇವಕನು ಕಿಟಕಿಯಿಂದ ನೋಡಿ " ಕಾರು ಬಂದಿದೆ" ಎಂದು ಹೇಳಿದನು.

ವಿಮಲೆಯು " ಹೊರಟು ಬಿಡುವಿರೇನು, ಈ ದಿವಸ ಪೂರಾ ಇರುವು ದಾಗಿ ವಚನ ಕೊಟ್ಟಿರಲಿಲ್ಲವೇ ?" ಎಂದಳು.

ಭಟ್ಟನು "ಈ ದಿನ ಪೂರಾ ನಿನ್ನೊಡನೆ ಇರುವುದಾಗಿ ವಚನ ಕೊಟ್ಟಿದ್ದೆವು. ಈಗ ನಾವು ನಿನ್ನನ್ನು ಬಿಟ್ಟು ಎಲ್ಲಿಗೂ ಹೋಗುವುದಿಲ್ಲ. ನಡೆ. ನಮ್ಮ ಜೊತೆಯಲ್ಲಿ ಈದಿನ ಬೋಟಿನಲ್ಲಿ "ಎಲಿಫೆಂಟ್ ಗುಹೆ"ಯ ದ್ವೀಪಕ್ಕೆ ಹೋಗಿ ಬರಲು ಬೋಟನ್ನು ರಿಜರ್ವ್ ಮಾಡಿದ್ದೇನೆ" ಎಂದು ಹೇಳಿದನು.

ವಿಮಲೆಯು ಕೋಣೆಯೊಳಗೆ ಹೋಗಿ ಮುಖವನ್ನು ತೊಳೆದು ವರಸಿ ಕೊಂಡು ಹಣೆಗೆ ಬೊಟ್ಟನ್ನು ಇಟ್ಟುಕೊಂಡು, ಬೇರೆ ಬಟ್ಟೆಗಳನ್ನು ಬದಲಾಯಿಸಿ, ಕಾಲಿಗೆ ಷೂ ಹಾಕಿಕೊಂಡು, ವ್ಯಾನಿಟಿಬ್ಯಾಗ್ ತೆಗೆದುಕೊಂಡು ಹೊರಗೆ ಬಂದಳು.

ಭಟ್ಟನು "ವಿಮಲಾದೇವಿ ! ಇಷ್ಟು ಹೊತ್ತು ಗೃಹಸ್ಥರ ಹೆಣ್ಣಿನಂತೆ ಇದ್ದೆ. ಈಗ ಸಿನಿಮಾ ನಟಿಯಂತೆ ಆಗಿಬಿಟ್ಟೆ. ಎಷ್ಟು ಬೇಗ ತಿದ್ದಿ ವೇಷ ಬದಲಾಯಿಸುವುದನ್ನು ಕಲಿತಿದ್ದೀಯೋ?" ಎಂದು ಹಾಸ್ಯ ಮಾಡಿದನು.

ವಿಮಲೆಯು "ಅದೇನೂ. ಇಲ್ಲ ನಾನು ಯಾವಾಗಲೂ ಗೃಹಸ್ಥರ ಹೆಣ್ಣೆ. ಉಡುಪನ್ನು ಬದಲಾಯಿಸಿದಾಗ ನಿಮ್ಮ ಕಣ್ಣಿಗೆ ನಟಿಯಂತೆ ಕಾಣು ತ್ತಿರುವೆನೋ ಏನೋ?" ಎಂದಳು

ಮೂವರೂ ಮೆಟ್ಟಲುಗಳನ್ನು ಇಳಿದು ಹೋಗಿ ಕಾರಿನಲ್ಲಿ ಕುಳಿತು, ಗೇಟ್‌ವೇ ಹತ್ತಿರ ಹೋದರು.

---